ಪ್ರತಿಭಾ ಗ್ರಂಥಮಾಲೆ : ವರ್ಷ ೪೩ : ಕಿರಣ-೪

# ಲೋಕನೀತಿ ನ್ಯಾಯಗಳು
# ಹಾಗು
# ಸಂಸ್ಕೃತ ಹಿತೋಕ್ತಿಗಳು

( ಅರ್ಥ-ವಿವರಣೆ ಸಹಿತ )

ಸಂಪಾದಕರು :

**ಕಾವ್ಯಪ್ರೇಮಿ**



ಪ್ರತಿಭಾ ಗ್ರಂಥಮಾಲೆ, ಧಾರವಾಡ

# ಮುನ್ನುಡಿ

ಸಂಸ್ಕೃತದಲ್ಲಿ **ಲೋಕನೀತಿ ನ್ಯಾಯಗಳು** ಲೌಕಿಕ ನ್ಯಾಯಗಳು ಅತ್ಯಂತ ಅಥವಾ ಪ್ರಸಿದ್ಧವಾಗಿವೆ. ಇವು ನಮ್ಮ ಕನ್ನಡದ 'ಗಾದೆಯ ಮಾತು' ಅಥವಾ 'ಜಾಣ್ನುಡಿ'ಗಳಿದ್ದಂತೆ. ನಮ್ಮ ಮಾತು, ಬರಹ, ಭಾಷಣಗಳು ಅರ್ಥಪೂರ್ಣವಾಗಲು ಸತ್ತ್ವಪೂರ್ಣವಾಗಲು, ಅದಕ್ಕೊಂದು ತೀಕ್ಷ್ಣತೆ, ವ್ಯಂಜಕತೆ, ಉಜ್ವಲತೆ ಬರಲು ಈ 'ಲೋಕನೀತಿ ನ್ಯಾಯ'ಗಳು ಅತ್ಯಂತ ಉಪಯುಕ್ತ ಹಾಗು ಸಹಕಾರಿಯಾಗಿದೆ. ಒಂದು ವಿಷಯವನ್ನು ಹೇಳು-ವಾಗ, ಅದಕ್ಕೆ ಪೋಷಕವಾಗುವಂತೆ ಈ ನ್ಯಾಯಗಳನ್ನು ಬಹಳ ಪರಿ-ಣಾಮಕಾರಿಯಾದ ರೀತಿಯಲ್ಲಿ ಬಳಸುವದುಂಟು. ಅವುಗಳಲ್ಲಿ ಆಳವಾದ ಅನುಭವವು ಅಡಕವಾಗಿರುತ್ತದೆ ಮತ್ತು ಅವು ಚಮತ್ಕಾರಯುಕ್ತವೂ ಆಗಿ-ರುವವು. ಅಂತೆಯೇ ಈ ಲೋಕನೀತಿ ನ್ಯಾಯಗಳು ಬಹಳ ಜನಪ್ರಿಯವಾಗಿವೆ ಹಾಗು ಸಂಸ್ಕೃತ ಭಾಷೆಯನ್ನು ಶ್ರೀಮಂತಗೊಳಿಸಿವೆ.

**ಲೋಕನೀತಿ ನ್ಯಾಯಗಳು** ಸೂತ್ರಗಳಂತಿದ್ದು, ಅವು ಒಂದು ತತ್ತ್ವವನ್ನು ಬೋಧಿಸುತ್ತವೆ. ನ್ಯಾಯವೆಂದರೆ ನೀತಿ. ಇವು ಲೋಕ-ದಲ್ಲಿಯ ನೀತಿಯನ್ನು ತಿಳಿಸಿಕೊಡುವವು. नि + इ ಈ ಧಾತುವಿನ ಪ್ರೇರಣಾರ್ಥಕ ರೂಪ ಅಂದರೆ नि (नितरा) + आययाति 'ಅತ್ಯಂತವಾಗಿ ಮುಟ್ಟಿಸುವುದು' ಎಂದು ಅರ್ಥಮಾಡಬಹುದು. ಒಂದು ವಿಷಯದ ಸೂಕ್ಷ್ಮಾತಿ ಸೂಕ್ಷ್ಮ ಅರ್ಥವನ್ನು ಮುಟ್ಟಿಸುವದು ಎಂತಲೂ ಅರ್ಥಯಿಸಬಹುದು. **ಲೋಕ**ದಲ್ಲಿ ಅಂದರೆ ವ್ಯವಹಾರದಲ್ಲಿ ಇವು ಪ್ರತಿಪಾದ್ಯ ವಿಷಯಗಳಿಗೆ ಒಯ್ದು ಮುಟ್ಟಿಸುವವು. ಲೋಕದಲ್ಲಿ ನಡೆಯುವ ಘಟನೆ ಅಥವಾ ನ್ಯಾಯಗಳೇ— ಇವು ಆಗಿರುವುದರಿಂದ ಇವುಗಳಿಗೆ 'ಲೌಕಿಕ ನ್ಯಾಯ ಅಥವಾ ಲೋಕನೀತಿ ನ್ಯಾಯ'ವೆಂಬ ಹೆಸರು.

ಸಂಸ್ಕೃತದಲ್ಲಿ ಇಂಥ ಲೌಕಿಕ ನ್ಯಾಯಗಳು ಹೇರಳವಾಗಿವೆ. ಉದಾ-ಹರಣೆಗಾಗಿ : " ಕುರುಡರಲ್ಲಿ ಮೆಳ್ಳಗಣ್ಣಿನವ ಶ್ರೇಷ್ಠ " ಎಂದು ನಾವು

ಕನ್ನಡದಲ್ಲಿ ಅನ್ನುವದನ್ನೇ ಸಂಸ್ಕೃತದಲ್ಲಿ " ಅಂಧಕಾಣ ನ್ಯಾಯ " ಎಂದು ಹೇಳಬಹುದು. ಆದರಂತೆ ಆಕಸ್ಮಿಕ ಘಟನೆಯನ್ನು ಹೇಳುವಾಗ " ಕಾಗೆ ಕೂಡುವದಕ್ಕೂ, ಟೊಂಗೆ ಮುರಿಯುವದಕ್ಕೂ ಸರಿಹೋಯಿತು." ಎಂದು ಅನ್ನುವುದನ್ನೇ ಸಂಸ್ಕೃತದಲ್ಲಿ "ಕಾಕತಾಲೀಯ ನ್ಯಾಯ" ಎಂದು ಹೇಳು- ತ್ತಾರೆ. ಅಂಧಾನುಕರಣ— ಅಂದರೆ ಅರಿವಿಲ್ಲದೆ ಕುರುಡು ನಂಬಿಕೆಯಿಂದ ಒಬ್ಬರನ್ನು ನೋಡಿ ಮತ್ತೊಬ್ಬರು ಅನುಸರಿಸುವುದನ್ನು ಹೇಳುವಾಗ "ಅಂಧ ಪರಂಪರಾ ನ್ಯಾಯ" ಎಂದು ಹೇಳುವರು. ಒಂದೇ ಕಾರ್ಯದಿಂದ ಎರಡು ಉದ್ದೇಶಗಳು ಸಾಧಿಸುವಲ್ಲಿ "ಅಡ್ಡಗೋಡೆಯ ಮೇಲೆ ದೀಪವಿಟ್ಟಂತೆ" ಎಂದು ಹೇಳುವುದನ್ನೇ ಸಂಸ್ಕೃತದಲ್ಲಿ ಹೇಳುವಾಗ, " ದೇಹಲೀ ದೀಪ ನ್ಯಾಯ " ಎಂದು ಹೇಳುವರು. ಹೀಗೆ ಸಂಸ್ಕೃತದಲ್ಲಿ ಲೌಕಿಕ ನ್ಯಾಯಗಳು ಸಾಹಿತ್ಯ, ಮೀಮಾಂಸಾ, ಶಾಂಕರಭಾಷ್ಯ ಇತ್ಯಾದಿಗಳಲ್ಲಿ ಸಮಯೋಚಿತವಾಗಿ ಮತ್ತು ಪ್ರತಿಪಾದ್ಯ ವಿಷಯಕ್ಕೆ ಪುಷ್ಟಿ ಕೊಡಲು ವಿಪುಲವಾಗಿ ಬಂದಿವೆ.

ಇದರಂತೆ **'ಹಿತೋಕ್ತಿಗಳು'** ಅಂದರೆ **'ಸುಭಾಷಿತಗಳು'** ಸಂಸ್ಕೃತ ದಲ್ಲಿ ವಿಪುಲವಾಗಿವೆ. ಅವು ಚಮತ್ಕಾರಯುತವಾಗಿದ್ದು, ಅವುಗಳಲ್ಲಿ ತತ್ತ್ವ, ಅನುಭವ ಹಾಗು ಸೊಗಸು ಅಡಕವಾಗಿವೆ. ಅವು ಮಾನವ ಕೋಟಿಯನ್ನು ಸನ್ಮಾರ್ಗಕ್ಕೆ ಹಚ್ಚುವ ದೊಡ್ಡ ಕೆಲಸವನ್ನು ಮಾಡುತ್ತವೆ. ಜೀವನದಲ್ಲಿ ಖಿನ್ನವಾದ ಮಾನವನ ಮನಸ್ಸಿಗೆ ನೆಮ್ಮದಿಯನ್ನು ಕೊಡುವವು.

ಇಂಥ ಈ ಎರಡು ಸಾಹಿತ್ಯದ ಶ್ರೇಷ್ಠವಾದ ಅಂಗಗಳನ್ನು ಪಂಡಿತ ಹಾಗು ಪಾಮರರಿಗೆ ಅರ್ಥಸಹಿತವಾಗಿ ನೀಡಿ ಸಂ. ಕಾವ್ಯಪ್ರೇಮಿಯವರು ಸಂಸ್ಕೃತದ ಸೊಬಗನ್ನು ಕನ್ನಡಿಗರ ಪ್ರಯೋಜನಕ್ಕಾಗಿ ನೀಡಿದ್ದಾರೆ. ವಿಶೇಷ ವಾಗಿ ಈಗಿನ ತರುಣ ಪೀಳಿಗೆಗೆ ಈ ಹೊತ್ತಿಗೆಯು ಅತ್ಯಂತ ಸಂಗ್ರಾಹ್ಯವೂ ಉದ್ಬೋಧಕವೂ ಆಗಿದೆ.

ಧಾರವಾಡ
೧೫-೬-೬೫

ವೇ. ಮೂ. ದತ್ತಾತ್ರೇಯಶಾಸ್ತ್ರಿ ಜಂತ್ಲಿ
ಅಧ್ಯಾಪಕರು, ಶ್ರೀಶಂಕರಾಚಾರ್ಯ ಸಂಸ್ಕೃತಪಾಠಶಾಲಾ

# ಪರಿವಿಡಿ

# ೧. ಅಂಧಗಜ ನ್ಯಾಯ

ಅಂದರೆ "ಕುರುಡರು ಮತ್ತು ಆನೆಯ ನ್ಯಾಯ"

ಇದಕ್ಕೆ ಸಂಬಂಧಿಸಿದ ಪ್ರಸಿದ್ಧ ಕಥೆ ಹೀಗಿದೆ:

ಒಂದು ಊರಲ್ಲಿ ಕೆಲವು ಕುರುಡರಿದ್ದರು. ಅವರಿಗೆ ಆನೆಯು ಹೇಗಿರುತ್ತದೆಯೆಂದು ತಿಳಿದುಕೊಳ್ಳುವ ಅಪೇಕ್ಷೆಯಾಯಿತು. ಒಂದು ಆನೆಯ ಬಳಿಗೆ ಬಂದು, ಅದನ್ನು ಮುಟ್ಟಿ, ನೋಡಿದರು. ಒಬ್ಬನು ಸೊಂಡಿಲನ್ನು ಮುಟ್ಟಿ ನೋಡಿ, ಆನೆಯು ಸರ್ಪದಂತಿದೆಯೆಂದು ತಿಳಿದು-ಕೊಂಡನು. ಇನ್ನೊಬ್ಬನು ಅದರ ಕಿವಿಯನ್ನು ಮುಟ್ಟಿ, ಆನೆಯು ಮೊರದಂತಿದೆಯೆಂದು ಭಾವಿಸಿದನು. ಮತ್ತೊಬ್ಬನು ಕಾಲನ್ನು ಮುಟ್ಟಿ, ಅದು ಕಂಬದಂತಿದೆಯೆಂದು ಊಹಿಸಿದನು. ಮಗುದೊಬ್ಬ ಹೊಟ್ಟೆಯನ್ನು ಮುಟ್ಟಿ, ಆನೆಯು ಗುಡಾಣದಂತಿದೆಯೆಂದು ನಿಶ್ಚಯಿಸಿದನು. ಅದರ ಬಾಲವನ್ನು ಮುಟ್ಟಿದ ಕುರುಡನು, ಆನೆಯು ಹಗ್ಗದಂತಿದೆಯೆಂದು ಹೇಳಿ-ದನು. ಆನೆ ಹೊರಟು ಹೋದ ಮೇಲೆ ಕುರುಡರಲ್ಲಿ ಜಗಳ ಆರಂಭ-ವಾಯಿತು.

ಹೀಗೆ ಒಂದು ವಿಷಯವನ್ನು ಸರಿಯಾಗಿ ತಿಳಿದುಕೊಳ್ಳುವುದರಲ್ಲಿ ಪರಸ್ಪರ ಜಗಳ ಹುಟ್ಟುವುದು. ಅವರು ತಿಳಿದುಕೊಂಡಿರುವುದು ಕೆಲವು ಅಂಶದಲ್ಲಿ ಸರಿ. ಕೆಲವು ಅಂಶದಲ್ಲಿ ತಪ್ಪು. ಅವರ ಜಗಳ ಅವಿವೇಕದಿಂದ ಉಂಟಾದದ್ದು. ಹಾಗೆಯೇ ಈಶ್ವರ, ಜೀವ, ಜಗತ್ತು— ಇಂತಹ ವಿಷಯಗಳಲ್ಲಿ ಮತಾಂಧರು ಜಗಳವಾಡುತ್ತಾರೆ ಅವರಾಡುವ ಮಾತು ಒಂದು ಅಂಶದಲ್ಲಿ ಸರಿ. ಇನ್ನೊಂದು ಅಂಶದಲ್ಲಿ ತಪ್ಪು. ವಿವೇಕಿಯು ಎಲ್ಲ ಮತಗಳನ್ನೂ ಸಮನ್ವಯಗೊಳಿಸಿ ಸಮಂಜಸವಾದ ಒಂದು ಸಿದ್ಧಾಂತ

ವನ್ನು ನಂಬುತ್ತಾನೆ. ಮತಾಂಧರ ಜಗಳವನ್ನು ನೋಡಿ ತನ್ನೊಳಗೇ ನಗುವನು. ಆಕಾರವನ್ನು ಕಣ್ಣಿನಿಂದ ನೋಡಿದವನು ಕುರುಡರ ಜಗಳವನ್ನು ನೋಡಿ ನಗದಿರುವನೇ?

ಸುರೇಶ್ವರಾಚಾರ್ಯರು ಬೃಹದಾರಣ್ಯಕ ವಾರ್ತಿಕದಲ್ಲಿ ಹೀಗೆ ಹೇಳು- ಹೇಳುತ್ತಾರೆ: "ನಿರಂಜನವೂ ನಿರ್ವಿಕಾರವೂ ಆದ ಬ್ರಹ್ಮ-ವಸ್ತುವನ್ನು ಅಜ್ಞಾನಿಗಳು ನಾನಾ ಬಗೆಯಾಗಿ ಕಲ್ಪಿಸಿಕೊಂಡಿದ್ದಾರೆ."—ಇದೇ ಅಂಧ-ಗಜ ನ್ಯಾಯ.



## ೨. ಅಂಧಗೋಲಾಂಗೂಲ ನ್ಯಾಯ

ಅಂದರೆ "ಕುರುಡ ಮತ್ತು ಹಸುವಿನ ಬಾಲದ ನ್ಯಾಯ"

ಒಬ್ಬ ಕುರುಡನು ದಾರಿ ತಪ್ಪಿದುದರಿಂದ ಅಸಹಾಯಕನಾಗಿ ಅಲೆದಾಡುತ್ತಿದ್ದನು. ಆಗ ಒಬ್ಬ ತುಂಟ ಮನುಷ್ಯನು ಅಲ್ಲಿಗೆ ಬಂದನು. ತನಗೆ ದಾರಿ ತೋರಿಸಬೇಕೆಂದು ಕುರುಡನು ಅವನನ್ನು ಬೇಡಿಕೊಂಡನು. ಆ ತುಂಟನು ಅಲ್ಲಿಯೇ ಮೇಯುತ್ತಿದ್ದ ಒಂದು ಸೊಕ್ಕಿದ ಹಸುವಿನ ಬಳಿಗೆ ಕರೆದುಕೊಂಡು ಹೋಗಿ, ಅದರ ಬಾಲವನ್ನು ಕುರುಡನು ಹಿಡಿದುಕೊಳ್ಳುವಂತೆ ಮಾಡಿದನು. ಅದನ್ನು ಹಿಡಿದುಕೊಂಡೇ ಮುಂದೆ ನಡೆದರೆ, ನೀನು ಹೋಗಬೇಕಾದ ಹಳ್ಳಿಗೇ ಹೋಗುತ್ತೀಯೆಂದು ಅವನಿಗೆ ಹೇಳಿಬಿಟ್ಟನು ! ಮುಂದೆ ಕುರುಡನ ಪಾಡು ಏನಾಗಿರಬಹುದೆಂದು ಊಹಿಸಿಕೊಳ್ಳಬಹುದು.

ಹೀಗೆ ತಿಳಿಯದವನಿಗೆ ನಂಬಿಗೆ ಹುಟ್ಟಿಸಿ ವಂಚಿಸುವಾಗ ಈ ನ್ಯಾಯವನ್ನು ಉಪಯೋಗಿಸುತ್ತಾರೆ. ಶ್ರೀ ಶಂಕರಾಚಾರ್ಯರು ಸೂತ್ರ-ಭಾಷ್ಯದಲ್ಲಿ ಒಂದು ಕಡೆಗೆ ಹೀಗೆ ಬರೆಯುತ್ತಾರೆ: "ಅಜ್ಞಾನಾದ ಮನುಷ್ಯನಿಗೆ ಪ್ರಮಾಣಭೂತವಾದ ಶಾಸ್ತ್ರವು ಸರಿಯಾದ ಮಾರ್ಗವನ್ನು ಉಪದೇಶಿಸಬೇಕು ಅದನ್ನು ಬಿಟ್ಟು, ಜಡವಸ್ತುವನ್ನು ಆತ್ಮವೆಂದು ಶಾಸ್ತ್ರವು ಹೇಳಿದರೆ, ಆ ಮನುಷ್ಯನು ಅದನ್ನೇ ನಂಬುತ್ತಾನೆ. ನಿಜವಾದ ಆತ್ಮ-ತತ್ತ್ವವನ್ನು ತಿಳಿಯದೇ ಹೋಗುತ್ತಾನೆ. ಇತ್ತ ಶ್ರೇಯಸ್ಸನ್ನೂ ಕಳೆದುಕೊಂಡು, ಅತ್ತ ಅನರ್ಥಕ್ಕೂ ಒಳಗಾಗುತ್ತಾನೆ."—ಇದು ಅಂಧ ಗೋಲಾಂಗೂಲನ್ಯಾಯ.



## ೩. ಅಂಧದರ್ಪಣ ನ್ಯಾಯ

ಅಂದರ "ಕುರುಡನಿಗೆ ಕನ್ನಡಿಯಿಂದೇನು?"

ಯಾವುದೊಂದು ಪದಾರ್ಥವೇ ಆಗಲಿ, ಅದರ ಉಪಯೋಗವನ್ನರಿತವನಿಗೆ ಮಾತ್ರ ಫಲಕಾರಿಯಾಗುತ್ತದೆ. ಉಪಯೋಗವನ್ನರಿಯದವರು ಅದನ್ನು ನಿಂದಿಸಬಹುದು. ಅದರಿಂದ ಆ ವಸ್ತುವಿಗೆ ಹಾನಿಯೇನೂ ಇಲ್ಲ. ಯೋಗವಾಸಿಷ್ಠದಲ್ಲಿ ಒಂದು ಶ್ಲೋಕವಿದೆ:

ಯಸ್ಯ ನಾಸ್ತಿ ಸ್ವಯಂ ಪ್ರಜ್ಞಾ ಶಾಸ್ತ್ರಂ ತಸ್ಯ ಕರೋತಿ ಕಿಮ್ ।
ಲೋಚನಾಭ್ಯಾಂ ವಿಹೀನಸ್ಯ ದರ್ಪಣಃ ಕಿಂ ಕರಿಷ್ಯತಿ ॥

" ಯಾರಿಗೆ ಸ್ವಂತ ಬುದ್ಧಿಯಿಲ್ಲವೋ, ಅವರಿಗೆ ಶಾಸ್ತ್ರವೇನು

ಮಾಡೀತು? ಎರಡೂ ಕಣ್ಣುಗಳು ಇಲ್ಲದವನಿಗೆ (ಕುರುಡನಿಗೆ) ಕನ್ನಡಿಯು ಪ್ರಯೋಜನವೇನು?"

ಆಧುನಿಕ ವಿಜ್ಞಾನ-ಶಾಸ್ತ್ರವನ್ನು ಅಲ್ಲಗಳೆಯುವ ಮತಾಂಧನೂ, ಸಂಸ್ಕೃತ ಭಾಷೆಯನ್ನೂ, ವೇದಶಾಸ್ತ್ರಗಳನ್ನೂ ನಿಂದಿಸುವ ವಿಜ್ಞಾನಿಯೂ ಕುರುಡರೇ ಸೈ. ಇಂಥವರಿಗೆ ಈ ನ್ಯಾಯವು ಅನ್ವಯಿಸುವುದು.



## ೪. ಅಂತರಂಗ ಬಹಿರಂಗಯೋರಂತರಂಗ ವಿಧಿರ್ಬಲೀಯಾನ್

ಅಂತರಂಗವೆಂದರೆ ಸ್ವಲ್ಪ ಕಾರಣಗಳಿಂದ ನೆರವೇರತಕ್ಕದ್ದು, ಹತ್ತಿರವಾದದ್ದು, ಸುಲಭವಾದದ್ದು—ಎಂದರ್ಥ. ಬಹಿರಂಗವೆಂದರೆ ಬಹಳ ಕಾರಣಗಳಿಂದ ನೆರವೇರತಕ್ಕದ್ದು, ದೂರವಾದದ್ದು, ಕಠಿಣವಾದದ್ದು ಎಂದು ಅರ್ಥವಾಗುವುದು. ಬಹಿರಂಗಕ್ಕಿಂತ ಅಂತರಂಗದ ಕಾರ್ಯ ಬಲವತ್ತರ. ಇದು ವ್ಯಾಕರಣಶಾಸ್ತ್ರದಲ್ಲಿ ಪ್ರಸಿದ್ಧವಾದ ನ್ಯಾಯವು.

ಲೋಕದಲ್ಲಿಯೂ ಇದು ಸ್ವತಃ ಸಿದ್ಧವಾಗಿದೆ. ಮನುಷ್ಯನು ಮುಂಜಾನೆ ಹಾಸಿಗೆಯಿಂದ ಎದ್ದು, ತನ್ನ ಶರೀರಸಂಬಂಧಿಯಾದ ಕಾರ್ಯವನ್ನು ಮೊದಲು ಮಾಡಿಕೊಳ್ಳುತ್ತಾನೆ. ಅನಂತರ ಮನೆಗೆಲಸ, ತರುವಾಯ ಬಂಧುಗಳ ಕೆಲಸ, ಮಿತ್ರರ ಕೆಲಸ. ಹಾಗೆಯೇ ಸುಲಭವಾದ ಕಾರ್ಯ ಒಂದು, ಕಠಿಣವಾದ ಕಾರ್ಯ ಒಂದು; ಒಟ್ಟು ಎರಡು ಕಾರ್ಯಗಳು ಅನಿವಾರ್ಯವಾಗಿ ಒದಗಿದರೆ, ಮೊದಲು ಸುಲಭವಾದ ಕಾರ್ಯವನ್ನು

ಮಾಡಿ, ಆಮೇಲೆ ಕಠಿಣವಾದ ಕಾರ್ಯಕ್ಕೆ ಕೈಹಾಕುತ್ತಾನೆ. ಶಾಸ್ತ್ರ-ದಲ್ಲಿಯೂ ಈ ನ್ಯಾಯವನ್ನವಲಂಬಿಸಿ ಕರ್ತವ್ಯಗಳನ್ನು ನಿರ್ಣಯಿಸು-ತ್ತಾರೆ.

ಈ ನ್ಯಾಯವನ್ನು ಮನಸ್ಸಿನಲ್ಲಿಟ್ಟು ಒಬ್ಬ ಕವಿಯು ಚಮತ್ಕಾರ-ವಾಗಿ ಹೇಳುತ್ತಾನೆ. ವಿರಹಪೀಡಿತೆಗೆ ಹೇಳುವ ಮಾತು:

"ಮನ್ಮಥಾಗ್ನಿಪರಿತಪ್ತಮನಸ್ಕೇ ಚಂದನಂ ಕಿಮುನುಲಿಂಪಸಿ ಬಾಲೇ |
ಕಿಂ ನ ವೇತ್ಸಿ ಬಹಿರಂಗ ವಿಧಾನಾತ್ ಅಂತರಂಗ ವಿಧಿರೇವ ಬಲೀಯಾನ್ ||

ಅರ್ಥ— "ಎಲೌ, ಕಾಮಾಗ್ನಿಯಿಂದ ಪೀಡಿತವಾದ ಮನಸ್ಸುಳ್ಳ ಬಾಲೆಯೇ! ಚಂದನವನ್ನು ದೇಹಕ್ಕೆ ಏಕೆ ಲೇಪಿಸಿಕೊಳ್ಳುವೆ? ಬಹಿರಂಗ ವಿಧಿಗಿಂತ ಅಂತರಂಗ ವಿಧಿಯೇ ಬಲಶಾಲಿಯೆಂದು ನಿನಗೆ ಗೊತ್ತಿಲ್ಲವೆ?" (ದೇಹಕ್ಕೆ ಮೇಲಿನಿಂದ ಚಂದನ ಬಳಿಯುವುದು ಬಹಿರಂಗ. ಅಂತರಂಗ-ವೆಂದರೆ— ಮನಸ್ಸು. ಮನಸ್ಸಿಗೆ ಚಿಕಿತ್ಸೆ ಮಾಡುವುದು ಉತ್ತಮ. ಪ್ರಿಯನ ಸಂಗಮವೇ ಮನಸ್ಸಿಗೆ ಚಿಕಿತ್ಸೆ. ಚಂದನ—ಲೇಪನದಿಂದ ವಿರಹದುಃಖವು ಹೆಚ್ಚುವುದು.)



## ೫. ಅದಿತ್ಸೋರ್ವಣಿಜಃ ಶ್ವಸ್ತನ ಭಣನ ನ್ಯಾಯ

ಹಣವನ್ನು ಕೊಡಲು ಇಚ್ಛೆಯಿಲ್ಲದ ವ್ಯಾಪಾರಿ— "ನಾಳೆ ಕೊಡು-ತ್ತೇನೆ"—ಎಂದು ಪತ್ರದಲ್ಲಿ ಬರೆದು ಕೊಟ್ಟಿದ್ದನು. ಪ್ರತಿದಿನ ಕೇಳಿದಾಗ-ಲೆಲ್ಲ— "ನಾಳೆ ತಾನೇ ನಾನು ಕೊಡಬೇಕಾದದ್ದು"— ಎಂದು ಉತ್ತರ

ಹೇಳಿ ಕಳಿಸುತ್ತಿದ್ದನು.

ಇದು ವ್ಯಾಪಾರಿಗಳಿಗೆ ಮಾತ್ರ ಅನ್ವಯಿಸತಕ್ಕದ್ದಲ್ಲ. ಸಾಹುಕಾರರಿಗೂ, ಸಾಲಗಾರರಿಗೂ— ಎಲ್ಲರಿಗೂ ಅನ್ವಯಿಸುತ್ತದೆ. ಸಾಹುಕಾರನ ಬಳಿಗೆ ಸಾಲವನ್ನೋ, ಚಂದಾಹಣವನ್ನೋ ಕೇಳಲು ಹೋದರೆ, 'ನಾಳೆ ಕೊಡೋಣ, ಬನ್ನಿರಿ" ಎಂಬ ಉತ್ತರಗಳು ಬಹುಶಃ ಸಿದ್ಧವಾಗಿರುತ್ತವೆ. ಸಾಲಗಾರನಿಗಂತೂ ಈ ಉತ್ತರವೇ ವಜ್ರಕವಚ. 'ನಾಳೆ ಎಂದರೆ ನಕಾರವೇ; ನಾಳೆ ಎಂಬುದು ನಾಸ್ತಿ ಎಂಬುದಕ್ಕೆ ಪರ್ಯಾಯ.'



## ೬. ಅಜಾತಪುತ್ರನಾಮೋತ್ಕೀರ್ತನ ನ್ಯಾಯ

"ಮಗನೇ ಹುಟ್ಟಿಲ್ಲ, ಅವನಿಗೆ ಹೆಸರಿಟ್ಟರಂತೆ!" ಹೆಂಡತಿಯೇ ಇಲ್ಲ, ಮಗನ ಹೆಸರು ರಾಮಕೃಷ್ಣ!' 'ಹುಟ್ಟುವ ಮಗುವಿಗೆ ಕುಲಾವಿ ಹೊಲಿದಂತೆ.'

ಈ ಗಾದೆಗಳು ಮನುಷ್ಯನ ಮನೋದೌರ್ಬಲ್ಯವನ್ನು ಸೂಚಿಸುವುವು. ಮನಸ್ಸು ತಿರುಕನ ಕನಸಿನಂತೆ ಗಾಳಿಗೋಪುರವನ್ನು ಕಟ್ಟುವುದು. ಸಾಧಿಸುವುದೋ ಇಲ್ಲವೋ ಎಂದು ವಿವೇಕಿಯು ಯೋಚಿಸಬೇಕಾದ ಕಾಲದಲ್ಲಿ, ಕಾರ್ಯವು ಕೈಗೂಡಿತೆಂದು ಹಿಗ್ಗುವ ಅವಿವೇಕಿಗೆ ಈ ನ್ಯಾಯವು ಅನ್ವಯಿಸುತ್ತದೆ.

## ೭. ಅಭ್ಯರ್ಹಿತಂ ಪೂರ್ವಮ್

ಹೆಚ್ಚು ಪೂಜ್ಯರಾದವರಿಗೆ ಪ್ರಥಮ ಸ್ಥಾನವನ್ನು ಕೊಡಬೇಕು. ಈ ಪದ್ಧತಿ ಲೋಕದಲ್ಲಿ ಇದ್ದೇ ಇದೆ. ಮನೆಯಲ್ಲಿ ತಾಯಿ-ತಂದೆಗಳಿಗೆ ಅಗ್ರಸ್ಥಾನವನ್ನು ಕೊಡುವುದರಿಂದ ಆರಂಭವಾಗಿ, ವಿವಾಹಾದಿ ಸಾಮಾಜಿಕ ಕಾರ್ಯಗಳಲ್ಲಿಯೂ, ಸಭೆಗಳಲ್ಲಿಯೂ, ಸರಕಾರದ ವ್ಯವಹಾರಗಳಲ್ಲಿಯೂ ಈ ನ್ಯಾಯಕ್ಕೆ ಮಾನ್ಯತೆ ಉಂಟು ಸರಕಾರವೇನೋ, ಅಧಿಕಾರಿಗಳ ವೇತನ ಮತ್ತು ಹೊಣೆಗಾರಿಕೆಗಳನ್ನು ಗಮನಿಸಿ ಶ್ರೇಷ್ಠತೆಯ ಅನುಕ್ರಮವನ್ನು ಗೊತ್ತುಪಡಿಸುತ್ತದೆ. ಆದರೆ ಸಮಾಜದಲ್ಲಿ ಇದರ ವ್ಯವಸ್ಥೆ ಹೇಗೆ? ಒಂದು ಶುಭಕಾರ್ಯದಲ್ಲಿ ಅನೇಕ ಬಗೆಯ, ವಿವಿಧ ಯೋಗ್ಯತೆಗಳ ಜನರು ಮಿಳಿತರಾಗುತ್ತಾರೆ. ವಿದ್ವಾಂಸರು, ಶ್ರೀಮಂತರು, ವೃದ್ಧರು, ಹತ್ತಿರದ ಬಂಧುಗಳು— ಹೀಗೆ ಅನೇಕ ಪ್ರಕಾರದ ವ್ಯಕ್ತಿಗಳು ಸೇರಿದಾಗ, ಈ ಅನುಕ್ರಮವನ್ನು ನಿರ್ಣಯಿಸುವುದು ತುಸು ಕಠಿಣವೇ. ಸಾಮಾನ್ಯವಾಗಿ, ಯಜಮಾನನ ಇಚ್ಛೆಯಂತೆ ಇದರ ವ್ಯವಸ್ಥೆಯಾಗುತ್ತದೆ. ಈ ಬಗೆಗೆ ಗೌತಮ ಮಹರ್ಷಿಗಳು ತಮ್ಮ ಧರ್ಮಸೂತ್ರದಲ್ಲಿ ಗೊತ್ತುಮಾಡಿದ ವ್ಯವಸ್ಥೆಯು ಮನನೀಯವಾದುದು.

> ವಿತ್ತ ಬಂಧು ಕರ್ಮಜಾತಿ ವಿದ್ಯಾ ವಯಾಂಸಿ ಮಾನ್ಯಾನಿ ।
> ಪರಬಲೀಯಾಂಸಿ ॥
> ಶ್ರುತಂತು ಸರ್ವೇಭ್ಯೋ ಗರೀಯಃ ॥ (ಗೌ. ಧ. ಸೂ.)

ಧನ, ಬಾಂಧವ್ಯ, ಜೀವನದ ವೃತ್ತಿ, ಜಾತಿ, ವಿದ್ಯೆ, ವಯಸ್ಸು— ಇವುಗಳನ್ನು ಅನುಲಕ್ಷಿಸಿ ಪೂಜ್ಯತೆಯನ್ನು ನಿರ್ಣಯಿಸಬೇಕು. ಇವುಗಳಲ್ಲಿ ಒಂದನೆಯದಕ್ಕಿಂತ ಎರಡನೆಯದು ಪ್ರಬಲ; ಅದಕ್ಕಿಂತ ಮೂರನೆಯದು;

ಹೀಗೆ ಉತ್ತರೋತ್ತರವಾಗಿ ಬಲಶಾಲಿ. ಧನಿಕನಿಗಿಂತ ಬಂಧುವು ಪೂಜ್ಯನು. ಅವನಿಗಿಂದ ಉತ್ತಮ ವೃತ್ತಿಯವನು ಪೂಜ್ಯನು. ಎಲ್ಲರಿಗಿಂತ ವೃದ್ಧನು ಹೆಚ್ಚು ಪೂಜ್ಯನು. ಆದರೆ ವೇದ, ವೇದಾರ್ಥಕೋವಿದನು ಸರ್ವಶ್ರೇಷ್ಠನು.

ಗೌತಮರು ಧನಕ್ಕೆ ಕನಿಷ್ಠ ಸ್ಥಾನವನ್ನು ಕೊಟ್ಟಿದ್ದಾರೆಂಬುದು ಗಮನೀಯವಾದ ಅಂಶ. ಈ ಕಾಲದಲ್ಲಿ ನಾವು ಮಾತ್ರ ಧನಕ್ಕೆ ಶ್ರೇಷ್ಠ ಸ್ಥಾನವನ್ನು ಕೊಡುತ್ತಿದ್ದೇವೆ.

'ಅಭ್ಯರ್ಹಿತಂ ಪೂರ್ವಂ' ಎಂಬುದು ಒಂದು ವ್ಯಾಕರಣಸೂತ್ರ. ದ್ವಂದ್ವಸಮಾಸದಲ್ಲಿ ಅನೇಕ ಶಬ್ದಗಳಿರುತ್ತವಷ್ಟೆ. ಅವುಗಳಲ್ಲಿ ಯಾವ ಶಬ್ದದ ಅರ್ಥವು ಹೆಚ್ಚು ಪೂಜ್ಯವೋ, ಆ ಶಬ್ದವನ್ನು ಮೊದಲು ಪ್ರಯೋಗಿಸಬೇಕು.

ಉದಾ:— 'ಮಾತಾಪಿತರೌ' ಧರ್ಮಶಾಸ್ತ್ರದಲ್ಲಿ ತಂದೆಗಿಂತ ತಾಯಿ ಹೆಚ್ಚು ಪೂಜ್ಯಳೆಂದು ಹೇಳಿದೆ. ಈ ಸೂತ್ರವು ಎಷ್ಟು ವ್ಯಾಪಕವಾಗಿ ನ್ಯಾಯರೂಪವನ್ನು ಹೊಂದಿದೆಯೆಂಬುದನ್ನು ಗಮನಿಸಬೇಕು.



## ೮. ಅರಣ್ಯರೋದನ ನ್ಯಾಯ

"ಕಾಡಿನಲ್ಲಿ ಅತ್ತರೆ ಕೇಳುವವರಾರು ?" ಗಂಟಲುನೋವೇ ಅದರ ಫಲ. ವ್ಯರ್ಥವಾದ ಪ್ರಯತ್ನವನ್ನು ವರ್ಣಿಸುವಾಗ ಈ ನ್ಯಾಯವು ಉಪಯೋಗಕ್ಕೆ ಬರುತ್ತದೆ. ಒಬ್ಬ ಕವಿಯು ತನ್ನ ಪರಿಶ್ರಮವು ನಿಷ್ಫಲ-

ವಾಯಿತೆಂಬುದನ್ನು ಸುಂದರವಾಗಿ ವರ್ಣಿಸಿದ್ದಾನೆ. 'ಗುಣಗ್ರಾಹಿಯಲ್ಲದ ಮೂರ್ಖನಾದ ಒಡೆಯನ ಸೇವೆಯನ್ನು ಮಾಡಿದ್ದಾಯಿತು. ಈ ಸೇವೆ ಅರಣ್ಯರೋದನದಂತೆಯೂ, ಹೆಣಕ್ಕೆ ಚಂದನಲೇಪನ ಮಾಡಿದಂತೆಯೂ ಆಯಿತು. ನೆಲದಲ್ಲಿ ಕಮಲದ ಒಳ್ಳೆಯನ್ನು ನೆಟ್ಟಂತೆಯೂ, ಮರಳು-ಗಾಡಿನಲ್ಲಿ ಮಳೆ ಸುರಿದಂತೆಯೂ ಆಯಿತು. ಈ ಸೇವೆ ನಾಯಿಯ ಬಾಲ-ವನ್ನು ನೆಟ್ಟಗೆ ಮಾಡಿದಂತೆ. ಇದು ಕಿವುಡನಿಗೆ (ಕಿವಿಯಲ್ಲಿ) ಮಾಡಿದ ಉಪದೇಶ; ಕುರುಡನ ಮುಖಕ್ಕೆ ಹಿಡಿದ ಕನ್ನಡಿ.'



## ೯. ಅರುಂಧತೀ ಪ್ರದರ್ಶನ ನ್ಯಾಯ

ವಿವಾಹಕಾಲದಲ್ಲಿ ವಧುವಿಗೆ ಅರುಂಧತೀ-ನಕ್ಷತ್ರವನ್ನು ತೋರಿಸುವ ಸಂಪ್ರದಾಯವಿದೆ. ಸಪ್ತರ್ಷಿ-ಮಂಡಲದಲ್ಲಿರುವ ವಸಿಷ್ಠ ನಕ್ಷತ್ರದ ಪಕ್ಕ-ದಲ್ಲಿ ಒಂದು ಚಿಕ್ಕ ನಕ್ಷತ್ರವಿರುತ್ತದೆ; ಅದೇ ಅರುಂಧತೀ. ಪುರೋಹಿತರು ಅರುಂಧತಿಯನ್ನು ತೋರಿಸುತ್ತೇನೆಂದು ಹೇಳಿ, ಅದರ ಹತ್ತಿರವಿರುವ ದೊಡ್ಡ ನಕ್ಷತ್ರವನ್ನು ತೋರಿಸುತ್ತಾರೆ. ಆಮೇಲೆ ಚಿಕ್ಕದನ್ನು (ಅರುಂಧತಿ) ತೋರಿಸುತ್ತಾರೆ. ವಧುವಿಗೆ ಅದೇ ಅರುಂಧತಿಯೆಂದೂ, ಮೊದಲು ನೋಡಿದ ದೊಡ್ಡ ನ್ಷತ್ರವು ಅರುಂಧತಿಯಲ್ಲವೆಂದೂ ಹೇಳುತ್ತಾರೆ. ಆಗ ವಧುವು ಆ ನಕ್ಷತ್ರವನ್ನು ಸರಿಯಾಗಿ ಗುರುತಿಸುತ್ತಾಳೆ.

ಹೀಗೆ ಅತಿ ಸೂಕ್ಷ್ಮವಾದ ವಸ್ತುವಿನ ಪರಿಚಯ ಮಾಡಿಕೊಡು-ವಾಗ, ಅದಕ್ಕೆ ನಿಕಟವಾಗಿ, ಸ್ಥೂಲವೂ ಸುಲಭಗ್ರಾಹ್ಯವೂ ಆದ ವಸ್ತು-ವಿನ ಪರಿಚಯವನ್ನು ಮೊದಲು ಮಾಡಿಸಿ, ಅದು ತಿಳಿದ ಮೇಲೆ ಸೂಕ್ಷ್ಮ

ವಾದ ವಸ್ತುವಿನ ಜ್ಞಾನ ಮಾಡಿಕೊಡುವುದು ಶಿಕ್ಷಣಪದ್ಧತಿ. ಆಗ ಕಠಿಣವಾದ ವಿಷಯವನ್ನು ವಿದ್ಯಾರ್ಥಿಯು ಕ್ರಮವಾಗಿ ತಿಳಿದುಕೊಳ್ಳು-ತ್ತಾನೆ. ಮೂರ್ತಿಪೂಜೆಯು ಸಾಮಾನ್ಯ ಜನರಿಗಾಗಿ ಉಪದೇಶಿಸಲ್ಪಟ್ಟಿದೆ. ಮಾನವನು ಅದನ್ನೇ ಭಕ್ತಿಯಿಂದ ಪೂಜಿಸಿ, ಸಿದ್ಧಿ ಪಡೆದ ಮೇಲೆ ಸರ್ವಾಂತರ್ಯಾಮಿಯಾದ ಪರಮಾತ್ಮನ ಸಾಕ್ಷಾತ್ಕಾರವು ಸುಲಭವಾಗು-ತ್ತದೆ.



## ೧೦. ಅರ್ಧಜರತೀಯ ನ್ಯಾಯ

ಈ ನ್ಯಾಯವನ್ನು ಶಾಸ್ತ್ರಕಾರರು ಹೆಚ್ಚಾಗಿ ಬಳಸಿದ್ದಾರೆ. ಆದರೆ ಈ ನ್ಯಾಯದ ಶಬ್ದಾರ್ಥದ ವಿಷಯದಲ್ಲಿ ವಿವಿಧ ಅಭಿಪ್ರಾಯಗಳಿವೆ. ಆದರೆ ತಾತ್ಪರ್ಯದಲ್ಲಿ ಹೆಚ್ಚು ವ್ಯತ್ಯಾಸವಿಲ್ಲ. ಜರತೀ ಎಂದರೆ ವೃದ್ಧೆ-ಮುದುಕಿ. ಒಬ್ಬ ಹೆಂಗಸು ಅರ್ಧಭಾಗ ಮುದುಕಿಯಾಗಿದ್ದಾಳೆಂದರೆ ತಾತ್ಪರ್ಯವೇನು? ಯುವತಿಯಲ್ಲಿಯೇ ಮುದುಕಿಯಂತೆ ಸುಕ್ಕುಚರ್ಮ ಮುಂತಾದ ಲಕ್ಷಣಗಳು ಕಂಡುಬಂದರೆ ಅವಳನ್ನು ಯುವತಿ ಎನ್ನಬೇಕೆ? ಅವಳನ್ನು ಯಾರು ಮೋಹಿಸುವರು? ಅವಳು ಜನರ ಉಪೇಕ್ಷೆಗೆ ಪಾತ್ರ-ಳಾಗುವಳು. ಹಾಗೆಯೇ ಯಾವುದಾದರೊಂದು ಶಾಸ್ತ್ರದಲ್ಲಿ ಅಥವಾ ಪ್ರತಿ-ಪಾದ್ಯವಾದ ಒಂದು ಅಂಶದಲ್ಲಿ ಅರ್ಧವನ್ನು ನಂಬಿ ಅರ್ಧವನ್ನು ಬಿಟ್ಟು ಬಿಟ್ಟರೆ, ಆ ನಂಬಿಕೆ ಅರ್ಧ ಜರತೀಯವಾದುದು.

ಉದಾಹರಣೆ— ವೇದದಲ್ಲಿ ಹೇಳಿದ ಸತ್ಯ, ಶೌಚ, ಅಹಿಂಸೆ ಮುಂತಾದ ಅಂಶಗಳನ್ನು ನಂಬುವುದು; ಆದರೆ ವೇದದಲ್ಲಿಯೇ ಹೇಳಿದ

ವರ್ಣಾಶ್ರಮ ಧರ್ಮಗಳನ್ನು ನಂಬದಿರುವುದು—ಇದು ಅರ್ಧ ಜರತೀಯ ನಾಯ.

ಈ ನ್ಯಾಯವನ್ನು ವಿವರಿಸುತ್ತ ಆನಂದಗಿರಿಯು ಇದಕ್ಕೆ ಒಂದು ದೃಷ್ಟಾಂತವನ್ನು ಹೇಳುತ್ತಾನೆ: "ಕೋಳಿಯ ಅರ್ಧ ದೇಹವನ್ನು ತಿನ್ನು-ವದಕ್ಕಾಗಿಯೂ, ಉಳಿದ ಅರ್ಧವನ್ನು ತತ್ತಿ ಇಡುವುದಕ್ಕಾಗಿಯೂ ಉಪಯೋಗಿಸುವುದು ಸಾಧ್ಯವಿಲ್ಲವಷ್ಟೆ !"



## ೧೧. ಅಲಂಕೃತ್ಯ ಶಿರಚ್ಛೇದಃ

ಮೊದಲು ಅಲಂಕಾರ ಮಾಡಿ ಆಮೇಲೆ ತಲೆಯನ್ನು ಕತ್ತರಿಸಿ ಹಾಕುವುದು ! ಪರಕೀಯ ಸಿದ್ಧಾಂತವನ್ನು ಅನೇಕ ಯುಕ್ತಿಗಳಿಂದ ಸಾಧಿಸಿ, ಕೊನೆಗೆ ಅದನ್ನು ಖಂಡಿಸುವಾಗ ಈ ನ್ಯಾಯವನ್ನು ಬಳಸುತ್ತಾರೆ. ದುರ್ಗಾ-ದೇವಿಗೆ ಬಲಿಕೊಡುವಾಗ ಕುರಿಯನ್ನು ಹೂಮಾಲೆಯಿಂದ ಅಲಂಕರಿಸುವು-ದುಂಟು.

ಇವರು ಮಹಾಪುರುಷರೆಂದು ಸ್ತುತಿಸಿ, ಕೊನೆಯಲ್ಲಿ ಅವರಲ್ಲಿದ್ದ ಒಂದು ಕೆಟ್ಟ ಗುಣವನ್ನು ಬಯಲಿಗೆಳೆದಾಗ ಇದನ್ನು ಉಪಯೋಗಿಸ-ಬಹುದು.—ಆಂಟೋನಿಯು ಬ್ರೂಟಸ್‌ನನ್ನು ಮೊದಲು ಸ್ತುತಿಸಿ ನಂತರ ನಿಂದಿಸಿದಂತೆ.



## ೧೨. ಅಶಕ್ತೋಽಹಂ ಗೃಹಾರಂಭೇ ಶಕ್ತೋಽಹಂ ಗೃಹಭಂಜನೇ

"ನನಗೆ ಮನೆಯನ್ನು ಕಟ್ಟಲು ಶಕ್ತಿಯಿಲ್ಲ. ಆದರೆ ಮನೆಯನ್ನು ಒಡೆದು ಹಾಕಲು ಶಕ್ತಿಯುಂಟು !"—ಎಂಬ ನ್ಯಾಯ.

ಇದರ ಅರ್ಥವು ಸ್ಪಷ್ಟವಾಗಿದೆ. ಯಾವುದೊಂದು ಸಂಸ್ಥೆಯನ್ನು ಕಟ್ಟಿ ಬೆಳೆಸಿಕೊಂಡು ಬರುವುದು ಕಠಿಣವಾದ ಕೆಲಸವು. ಆದರೆ ಹಿರಿಯರು ಅತ್ಯಂತ ಧೈರ್ಯ, ತ್ಯಾಗಗಳಿಂದ ಕಟ್ಟಿದ ಸಂಸ್ಥೆಯನ್ನು ಒಡೆಯುವುದು ಸುಲಭವಾದುದು. ಒಬ್ಬರು ಮಾಡಿದ ಕೆಲಸದಲ್ಲಿ ದೋಷವನ್ನು ಕಂಡು-ಹಿಡಿಯುವ ಪ್ರವೃತ್ತಿ ಮಾನವನಲ್ಲಿ ಅನಾದಿಕಾಲದಿಂದಲೂ ಬೇರೂರಿ ಬಂದಂತೆ ಕಾಣುತ್ತದೆ. ರಾಜಕೀಯದಲ್ಲಿಯಂತೂ ಈ ಪ್ರವೃತ್ತಿ ಅತಿ-ಯಾಗಿದೆ. "ಹೇಳುವುದು ಸುಲಭ, ಮಾಡುವುದು ಕಷ್ಟ." ಮುಂತಾದ ಮಾತುಗಳೂ ಈ ನ್ಯಾಯದ ಅರ್ಥವನ್ನೇ ವಿವರಿಸುತ್ತವೆ.



## ೧೦. ಅಶೋಕವನಿಕಾ ನ್ಯಾಯ

ರಾವಣನು ಸೀತಾದೇವಿಯನ್ನು ಅಶೋಕವನದಲ್ಲಿ ಬಂಧಿಸಿ ಇಟ್ಟನು. ಅವನ ರಾಜ್ಯದಲ್ಲಿ ಅನೇಕ ಕಾರಾಗೃಹಗಳೂ, ಉದ್ಯಾನವನಗಳೂ, ಇರು-

ವಾಗ, ಅಶೋಕವನದಲ್ಲಿಯೇ ಆಕೆಯನ್ನು ಸೆರೆಯಿಡಲು ಕಾರಣವೇನು ? ಅದಕ್ಕೆ ನಿಯತವಾದ ಕಾರಣವೇನೂ ಇಲ್ಲ. ಎಲ್ಲೋ ಒಂದು ಕಡೆ ಅವಳನ್ನು ನಿರ್ಬಂಧದಲ್ಲಿ ಇಡಬೇಕಾಗಿತ್ತು. ಅಶೋಕವನದಲ್ಲಿ ಇಡಬೇಕೆಂದು ಅವನಿಗೆ ಅನಿಸಿತು; ಅಲ್ಲಿ ಇಟ್ಟನು. ಇದೇ ಅದಕ್ಕೆ ಉತ್ತರ. ಹಾಗೆಯೇ ಕೆಲವು ವೇಳೆ ನಾವು ಮಾಡುವ ಕೆಲಸಗಳಿಗಾಗಲಿ, ಆರಿಸುವ ವಸ್ತುವಿಗಾಗಲಿ, ಕ್ಲಪ್ತವಾದ ಕಾರಣವಿರುವುದಿಲ್ಲ. ಆಗ ಹೀಗೇ ಏಕೆ?—ಎಂದು ಯಾರಾದರೂ ಕೇಳಿದರೆ 'ಅಶೋಕವನಿಕಾ ನ್ಯಾಯ'ವೇ ಅದರ ಉತ್ತರ.

ಆದರೆ ನಮ್ಮ ಕಾರ್ಯಗಳು ಸಕಾರಣವಾಗಿರಬಾರದೆಂದು ಅರ್ಥವಲ್ಲ: ಯಾವುದಕ್ಕೆ ಕಾರಣದ ಅಪೇಕ್ಷೆಯಿಲ್ಲವೋ, ಫಲದಲ್ಲಿ ಭೇದವೇನೂ ಇಲ್ಲವೋ, ಆ ಸಂದರ್ಭದಲ್ಲಿ ನಮ್ಮ ಇಚ್ಛೆಯೇ ಕಾರ್ಯಕ್ಕೆ ನಿಯಾಮಕ-ವಾಗುತ್ತದೆ. ಸಾಯಂಕಾಲ ವಾಯುಸೇವನೆಗೆ ಕೃಷಿಮಹಾವಿದ್ಯಾಲಯದ ಕಡೆಗೆ ಹೋಗಬಹುದು. ಅದು ಅಶೋಕವನಿಕಾನ್ಯಾಯವಾಯಿತು. ಕೃಷಿ ವಿದ್ಯಾಲಯದಲ್ಲಿರುವ ಒಬ್ಬ ಮಿತ್ರನ ಭೆಟ್ಟಿಯಾಗಬೇಕೆಂಬ ಉದ್ದೇ-ಶವೂ ಇದ್ದರೆ, ಆಗ ಆ ವಾಯುವಿಹಾರವು ಸಕಾರಣವಾಯಿತು. ಅದು 'ಅಶೋಕವನಿಕಾ' ನ್ಯಾಯವಾಗಲಾರದು.



## ೧೪. ಅಸಿಧಾರಾ ಮಧುಲೇಹನ ನ್ಯಾಯ

ಅಸಿಧಾರಾ ಎಂದರೆ ಖಡ್ಗದ ಅಲಗು. ಅದಕ್ಕೆ ಲೇಪಿಸಿರುವ ಜೇನು ತುಪ್ಪವನ್ನು ನೆಕ್ಕಬೇಕು ! ಯಾವ ಕಾರ್ಯದಲ್ಲಿ ಪ್ರಯೋಜನವು ಅತ್ಯ-ಲ್ಪವೋ, ಭಯಂಕರವಾದ ಅಪಾಯವು ನಿಶ್ಚಿತವೋ, ಅಂತಹ ಕಾರ್ಯ-

ವನ್ನು ವಿವರಿಸುವಾಗ ಈ ನ್ಯಾಯದ ಉಪಯೋಗವಾಗುತ್ತದೆ. ಇದಕ್ಕೆ ತುಸು ಅರ್ಥಭೇದದಲ್ಲಿ 'ಅಸಿಧಾರಾವ್ರತ'ವೆಂದೂ ಹೇಳುತ್ತಾರೆ. ಆಶಾ-ಪಾಶಗಳಿಗೆ ವಶನಾಗದೆ ಗೃಹಸ್ಥನು ಸನ್ಮಾರ್ಗದಲ್ಲಿ ಸಂಸಾರವನ್ನು ನಡೆಸಿ-ಕೊಂಡು ಹೋಗುವುದೂ, ಅಧಿಕಾರಿಯು ದಾಕ್ಷಿಣ್ಯ-ಲಂಚಗಳಿಗೆ ವಶ-ನಾಗದೆ ತನ್ನ ಕರ್ತವ್ಯವನ್ನು ನ್ಯಾಯಮಾರ್ಗದಲ್ಲಿ ನಡೆಯಿಸುವುದೂ 'ಅಸಿಧಾರಾ ಮಧುಲೇಹನ'ವಾಗುತ್ತದೆ.



## ೧೫. ಅಹೃದಯ ವಚಸಾಮಹೃದಯಮುತ್ತರಮ್

'ಹೃದಯವಿಲ್ಲದ ಮಾತಿಗೆ ಹೃದಯವಿಲ್ಲದ ಉತ್ತರ; 'ಶಠಂ ಪ್ರತಿ-ಶಾಠ್ಯಂ' [ fearless words get heartless answer] ದುಷ್ಟರಿಗೆ ದುಷ್ಟ ಭಾಷೆಯಲ್ಲಿಯೇ ಉತ್ತರ ಕೊಡಬೇಕು. ಅನುಕಂಪ, ಸಹಾನುಭೂತಿ ಮತ್ತು ವಿಮರ್ಶೆಗಳಿಲ್ಲದೆ ಮಾತನಾಡಿದರೆ, ಅಂತಹ ಉತ್ತ-ರವೇ ದೊರಕುವುದು—ಎಂದು ಅಭಿಪ್ರಾಯ.



## ೧೬. ಆಕಾಶ ಮುಷ್ಟಿಹನನ ನ್ಯಾಯ

ಆಕಾಶವನ್ನು ಮುಷ್ಟಿಯಿಂದ ಗುದ್ದಲು ಹೋಗುವುದು ವ್ಯರ್ಥವಲ್ಲವೇ ? ಅಸಾಧ್ಯವಾದ ಕಾರ್ಯಕ್ಕಾಗಿ ವ್ಯರ್ಥ ಶ್ರಮಪಡುವುದೆಂದು ಇದರ ಅರ್ಥ ಆಕಾಶವನ್ನು ಗುದ್ದಿದರೆ ಕೈ ನೋಯುವುದೇ ಹೊರತು, ಆಕಾಶಕ್ಕೆ ಪೆಟ್ಟು ತಾಗುವುದಿಲ್ಲ.



## ೧೭. ಆಮ್ರಾಶ್ಚ ಸಿಕ್ತಾಃ ಪಿತರಶ್ಚ ತೃಪ್ತಾಃ

ಮಾವಿನ ಮರಕ್ಕೆ ನೀರೆರೆದಂತೆಯೂ ಆಯಿತು, ಪಿತೃಗಳಿಗೆ ತಪ್ತಿಯೂ ಆಯಿತು. ಒಂದೇ ಕಾರ್ಯದಿಂದ ಎರಡು ಪ್ರಯೋಜನ ದೊರೆಯಬಹುದು.

ಉದಾ— ಪಿತೃಗಳಿಗೆ ತರ್ಪಣ ಕೊಡಬೇಕಾಗಿದೆ. ಮನೆಯಲ್ಲಿಯೋ, ನದೀತಟಾಕದಲ್ಲಿಯೋ ತರ್ಪಣ ಕೊಡುವುದರ ಬದಲಾಗಿ, ಮಾವಿನ ಮರದ ಬುಡದಲ್ಲಿ (ಬೊಡ್ಡೆಯ ಹತ್ತಿರ) ತರ್ಪಣ ಕೊಟ್ಟರೆ ಎರಡೂ ಕಾರ್ಯಗಳಾಗುತ್ತವೆ. ಹೀಗೆ ಮಾಡುವುದು ಜಾಣರ ಲಕ್ಷಣ! 'ಸ್ವಕಾರ್ಯವೂ ಆಯಿತು. ಸ್ವಾಮಿಕಾರ್ಯವೂ ಆಯಿತು.'—ಎಂಬ ಮಾತೂ ಇದೇ ಅಭಿಪ್ರಾಯದ್ದಾಗಿದೆ.



## ೧೮ ಆಮ್ರಾನ್ ಪೃಷ್ಟಃ ಕೋವಿದಾರಾನಾಚಷ್ಟೇ

"ಮಾವಿನ ಮರದ ವಿಷಯವಾಗಿ ಕೇಳಿದರೆ ಕೋವಿದಾರ ಮರಗಳ ಸುದ್ದಿಯನ್ನು ಹೇಳುತ್ತಾನೆ." ಪ್ರಶ್ನೆಗೆ ತಕ್ಕ ಉತ್ತರ ಹೇಳದೆ, ಅಸಂಬದ್ಧವಾದ ಯಾವುದೋ ಸಂಗತಿಯನ್ನು ಹೇಳುತ್ತಾನೆಂದು ತಾತ್ಪರ್ಯ. "ಕಿವುಡ ಕಿಚ್ಚಡಿ ಬೇಡಿದರೆ, ಗೌಡ ಹಚ್ಚಡ ಬೇಡಿದ." 'ಎಲ್ಲಿಯೋ ಒದೆದರೆ ಎಲ್ಲಿಯವೋ ಹಲ್ಲು ಬಿದ್ದವಂತೆ.' ಎಂಬ ಗಾದೆಗಳ ಅರ್ಥವೂ ಇದೇ.



## ೧೯ ಆಶಾಮೋದಕ ತೃಪ್ತನ್ಯಾಯ

ಮನಸ್ಸಿನಲ್ಲಿಯೇ ಸಿಹಿ ತಿನಿಸುಗಳನ್ನು ಮಾಡಿ, ತಿಂದು ತೃಪ್ತಿ ಹೊಂದುವುದು! ಉದ್ದಿಷ್ಟ ಕಾರ್ಯ ನೆರವೇರುವುದು ತೀರ ಕಡಿಮೆ, ಇಂಥ ಸಂದರ್ಭದಲ್ಲಿ ಅದು ನೆರವೇರಿತೆಂದೂ, ಕೈಗೆ ಫಲ ಸಿಕ್ಕಿತೆಂದೂ ಭಾವಿಸುವುದು, ಈ ನ್ಯಾಯದ ತಾತ್ಪರ್ಯ. ಹೀಗೆ ಹಗಲುಗನಸು ಕಾಣುವ ಜನರಿದ್ದಾರೆ. 'ಮನಸ್ಸಿನಲ್ಲಿ ಮಂಡಿಗೆ ಮಾಡಿದರೆ ಗೋದಿಯ ವೆಚ್ಚ ಕೊಡುವವರಾರು?' ಎಂಬ ಗಾದೆಯ ಮಾತೂ ಈ ಅಭಿಪ್ರಾಯದ್ದೇ.



## ೨೦. ಇತೋ ವ್ಯಾಘ್ರ, ಇತಸ್ತಟೀ

'ಇತ್ತ ದರಿ, ಅತ್ತ ಪುಲಿ !'— ಇತ್ತ ಹುಲಿ ಬೆನ್ನುಹತ್ತಿದೆ, ಅತ್ತ ಹೋಗಿ ಪಾರಾಗಬೇಕೆಂದರೆ ದೊಡ್ಡ ಕಂದಕವಿದೆ. ಇಕ್ಕಳದಲ್ಲಿ ಸಿಕ್ಕಿಕೊಂಡಂತೆ— ಉಭಯ ಸಂಕಟದಲ್ಲಿ ಬಿದ್ದ ಮನುಷ್ಯನ ಗತಿಯನ್ನು ಕುರಿತು ಹೇಳುವ ನ್ಯಾಯವಿದು.



## ೨೧. ಉಪಜೀವ್ಯವಿರೋಧಸ್ಯಾಯುಕ್ತತ್ವ ನ್ಯಾಯ

ಉಪಜೀವ್ಯವೆಂದರೆ ಆಧಾರವಾದದ್ದು, ಕಾರಣೀಭೂತವಾದದ್ದು; ಅದಕ್ಕೆ ವಿರೋಧವಾಗಿ ನಡೆದುಕೊಳ್ಳುವುದು ಸರಿಯಲ್ಲ. 'ಉಪ್ಪುಂಡ ಮನೆಗೆ ಎರಡು ಬಗೆಯಬಾರದು'—ಎಂಬ ಗಾದೆಯನ್ನು ಇದು ಹೋಲುತ್ತದೆ. ಲೋಕವ್ಯವಹಾರದಲ್ಲಿ ಇದರ ಉಪಯೋಗವು ಸ್ಪಷ್ಟವಾಗಿದೆ. ಆದ್ದರಿಂದ ಉದಾಹರಣೆಗಳ ಅಗತ್ಯವಿಲ್ಲ.



# ೨೨. ಉಷ್ಟ್ರಕಂಟಕಭಕ್ಷಣ ನ್ಯಾಯ

ಒಂಟೆಯು ಮುಳ್ಳುಗಳನ್ನು ಭಕ್ಷಿಸುವ ನ್ಯಾಯ. ಒಂಟೆಯು ಮುಳ್ಳುಗಿಡಗಳನು ತಿನ್ನುತ್ತದೆ. ತಿನ್ನುವಾಗ ಮುಳ್ಳುಗಳು ಚುಚ್ಚಿ ನೋವಾದರೂ ಅದು ಲಕ್ಷಿಸುವುದಿಲ್ಲ. ಸೊಪ್ಪುಗಳ ರುಚಿಗೆ ಮೋಹಗೊಳ್ಳುತ್ತದೆ. ಅದರಂತೆಯೇ ಹಣವನ್ನು ಗಳಿಸುವಾಗ ಎಷ್ಟೇ ಕಷ್ಟವಾದರೂ ಮನುಷ್ಯನು ಅದನ್ನು ಸಹಿಸುತ್ತಾನೆ; ಮುಂದೆ ಸುಖವಿದೆಯೆಂದು ಧನಾರ್ಜನೆಯ ಕಾರ್ಯದಲ್ಲಿ ತೊಡಗುತ್ತಾನೆ.

ಈ ನ್ಯಾಯವನ್ನು ಇನ್ನೊಂದು ರೀತಿಯಲ್ಲಿಯೂ ಅರ್ಥಯಿಸುತ್ತಾರೆ. ಒಂಟೆಯು ಮುಳ್ಳುಗಳನ್ನು ತಿಂದು ಸುಖಿಸುತ್ತದೆ. ಆದರೆ ಮನುಷ್ಯನು ಅವನ್ನು ಎಂದೂ ತಿನ್ನಲಾರನು. ಒಂದು ವೇಳೆ ಅವನು ತಿನ್ನಲುಹೋದರೆ ಅವನಿಗೆ ಅಪಾಯವೇ ಆಗುವುದು ಹೀಗೆ ಒಂದೇ ವಸ್ತು ಕೆಲವರಿಗೆ ಸುಖದಾಯಕವೂ, ಮತ್ತೆ ಕೆಲವರಿಗೆ ದುಃಖದಾಯಕವೂ ಆಗಿರುತ್ತದೆ— ಎಂಬುದನ್ನು ವರ್ಣಿಸಲು ಈ ನ್ಯಾಯವನ್ನು ಉಪಯೋಗಿಸುತ್ತಾರೆ. ಯಾವ ಪದಾರ್ಥವೂ ಸ್ವತಃ ಸುಖಕಾರಿಯೂ ಅಲ್ಲ, ದುಃಖಕಾರಿಯೂ ಅಲ್ಲ. ದೇಶ, ಕಾಲ, ಪರಿಸ್ಥಿತಿಗಳನ್ನು ಅವಲಂಬಿಸಿ ಮನುಷ್ಯನ ಬುದ್ಧಿಗೆ ಹಾಗೆ ಕಂಡುಬರುತ್ತದೆ. ಈ ನ್ಯಾಯವು ಇಂಗ್ಲೀಷಿನಲ್ಲಿರುವ— What is one man's food is another man's poison— ಎಂಬುದಕ್ಕೆ ಹೆಚ್ಚಾಗಿ ಹೋಲುತ್ತದೆ.



## ೨೩. ಉಷ್ಟ್ರ ಲಗುಡ ನ್ಯಾಯ

'ಲಗುಡ'ವೆಂದರೆ ದೊಣ್ಣೆ. ಒಂಟೆಯು ದೊಣ್ಣೆಯ ಹೊರೆಯನ್ನು ಹೊತ್ತುಕೊಂಡು ಹೋಗುತ್ತದೆ. ಆದರೂ ಸವಾರನಿಂದ ಅದೇ ದೊಣ್ಣೆಯಿಂದ ಪೆಟ್ಟನ್ನೂ ತಿನ್ನುತ್ತದೆ! ಶ್ರಮವಹಿಸಿ ಹೊರೆಯನ್ನು ಹೊತ್ತುಕೊಂಡು ಹೋದುದಲ್ಲದೆ, ಅದರಿಂದ ಪೆಟ್ಟನ್ನು ತಿನ್ನುವ ಭಾಗ್ಯ ಅದಕ್ಕೆ ಲಭಿಸುತ್ತದೆ!

ಒಂದು ಸಿದ್ಧಾಂತದ ವಿರುದ್ಧ ಪ್ರತಿವಾದಿಯು ಅನೇಕ ಯುಕ್ತಿಗಳನ್ನು ಒಡ್ಡುತ್ತಾನೆ. ವಾದಿಯು ಆ ಯುಕ್ತಿಗಳನ್ನೇ ಪ್ರತಿವಾದಿಯ ವಿರುದ್ಧವಾಗಿ ತಿರುಗಿಸಿದರೆ 'ಗುರುವಿಗೆ ತಿರುಮಂತ್ರ' ವೆಂಬಂತೆ 'ಉಷ್ಟ್ರ ಲಗುಡ ನ್ಯಾಯ'ವಾಗುತ್ತದೆ.



## ೨೪. ಏಕದೇಶವಿಕೃತಮನನ್ಯವತ್

ಒಂದು ವಸ್ತುವಿನ ಯಾವದಾದರೊಂದು ಭಾಗವು ವ್ಯತ್ಯಾಸವಾದರೆ, ಊನವಾದರೆ, ಆ ವಸ್ತುವು ಬೇರೆ ವಸ್ತು ಆಗಲಾರದು.

ವ್ಯಾಕರಣ ಮಹಾಭಾಷ್ಯದಲ್ಲಿ ಇದಕ್ಕೆ ಒಂದು ಉದಾಹರಣೆಯನ್ನು

ಕೊಟ್ಟಿದ್ದಾರೆ : 'ನಾಯಿಯ ಬಾಲವನ್ನು ಕತ್ತರಿಸಿ ಹಾಕಿದರೂ, ಅದು ನಾಯಿಯಾಗಿಯೇ ಉಳಿಯುವುದು; ಅದು ಕತ್ತೆಯೂ ಆಗುವುದಿಲ್ಲ, ಕುದುರೆಯೂ ಆಗುವುದಿಲ್ಲ !' ಭಾರತ ದೇಶದ ಕೆಲ ಭಾಗವು ಕತ್ತರಿಸಲ್ಪಟ್ಟು ಪಾಕಿಸ್ತಾನವಾದರೂ ಉಳಿದ ಭಾರತವು ಭಾರತವೇ.



## ೨೫ ಏಕವೃಂತಗತಫಲದ್ವಯ ನ್ಯಾಯ

ಒಂದು ತೊಟ್ಟಿನಲ್ಲಿ ಎರಡು ಹಣ್ಣುಗಳು ಬಿಡುವುದುಂಟು. ಒಂದೇ ಶಬ್ದಕ್ಕೆ ಅಥವಾ ವಾಕ್ಯಕ್ಕೆ ಶ್ಲೇಷದಿಂದ ಎರಡು ಅರ್ಥಗಳನು ಕೊಡುವ ಸಂದರ್ಭಗಳು ಕಾವ್ಯದಲ್ಲಿ ಅಸಂಖ್ಯವಾಗಿರುತ್ತವೆ. ಆಗ ಈ ನ್ಯಾಯವನ್ನು ದೃಷ್ಟಾಂತಕ್ಕಾಗಿ ಉಪಯೋಗಿಸುತ್ತಾರೆ.

ಒಂದೇ ವಸ್ತುವಿನ ಉಪಯೋಗದಿಂದ ಏಕಕಾಲದಲ್ಲಿ ಎರಡು ಪ್ರಯೋಜನಗಳು ದೊರೆಯಬೇಕು— ಎಂಬ ಉದ್ದೇಶ. (Killing two birds with one stone)



## ೨೬. ಕಫೋಣಿ ಗುಡ ನ್ಯಾಯ

'ಕಫೋಣಿ' ಎಂದರೆ ಮೊಣಕೈ (Elbow), 'ಗುಡ' ಎಂದರೆ ಬೆಲ್ಲ. ಮೊಣಕೈಗೆ ಹತ್ತಿರುವ ಬೆಲ್ಲವನ್ನು ನೆಕ್ಕುವುದು! ಇದು ಅಸಾಧ್ಯವೇ. ಬೆಲ್ಲವು ಇಷ್ಟು ಸಮೀಪದಲ್ಲಿದ್ದು, ವಾಸನೆ ಮೂಗಿಗೆ ಬಡಿಯುತ್ತಿದ್ದರೂ ನಾಲಿಗೆಗೆ ಮಾತ್ರ ಸಿಲುಕುವುದಿಲ್ಲ. ಹಾಗೆಯೇ ಒಂದು ವಸ್ತು ಕೈಗೆ ಸಿಕ್ಕೂ, ಅದರ ಉಪಯೋಗವಾಗುವುದಿಲ್ಲ. ಆಗ ಈ ನ್ಯಾಯದ ಪ್ರಯೋಜನವಾಗುತ್ತದೆ. 'ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ' ಎಂಬ ಕನ್ನಡ ಗಾದೆಯೂ ಇದನ್ನೇ ಹೇಳುತ್ತದೆ.



## ೨೭ ಕಾಕತಾಲೀಯ ನ್ಯಾಯ

'ಕಾಗೆ ಮತ್ತು ತಾಳೆಹಣ್ಣಿನ ನ್ಯಾಯ.' ಕಾಗೆಯು ತನ್ನಷ್ಟಕ್ಕೆ ತಾನು ಎಲ್ಲಿಗೋ ಹಾರಿ ಹೊರಟಿತ್ತು. ಆಗ ಅಕಸ್ಮಾತ್ ಒಂದು ತಾಳೆಯ ಹಣ್ಣು ಆ ಕಾಗೆಯ ತಲೆಯ ಮೇಲೆ ಬಿದ್ದು, ಅದು ಸತ್ತು ಹೋಯಿತು. ಕಾಗೆಯು ಅಲ್ಲಿಗೆ ಹಾರಿ ಬರುವುದಕ್ಕೂ ತಾಳೆಹಣ್ಣು ಅದೇ ವೇಳೆಗೆ ಬೀಳುವುದಕ್ಕೂ ನಿರ್ದಿಷ್ಟವಾದ ಕಾರಣವಿಲ್ಲ. ಹೀಗೆ ಕಾರಣವಿಲ್ಲದೆ ಆಕಸ್ಮಿಕವಾಗಿ ಸಂಭವಿಸುವ ಘಟನೆಗೆ ಕಾಕತಾಲೀಯವೆನ್ನುವರು.

ಇದರ ಅರ್ಥವನ್ನು ಬೇರೊಂದು ರೀತಿಯಲ್ಲಿಯೂ ಹೇಳುತ್ತಾರೆ: ಕಾಗೆಯ ತಲೆಯ ಮೇಲೆ ತಾಳೆಯ ಹಣ್ಣು ಬೀಳಲಿಲ್ಲ; ಕಾಗೆ ಬರುವುದಕ್ಕೂ ಹಣ್ಣು ಬೀಳುವುದಕ್ಕೂ ಸರಿಹೋಯಿತು. ಕಾಗೆ ಆ ಹಣ್ಣನ್ನು ತಿಂದುಬಿಟ್ಟಿತು. ಅಂತೂ ಅಭಿಪ್ರಾಯ ಒಂದೇ. ಆಕಸ್ಮಿಕ ಘಟನೆ ಒಳ್ಳೆಯದಾದರೆ ಎರಡನೆಯ ಅರ್ಥವನ್ನೂ, ಕೆಡುಕಾದರೆ ಮೊದಲನೆಯ ಅರ್ಥವನ್ನೂ ಹೇಳಬೇಕು.



## ೨೮. ಕಾಕದಧಿಘಾತಕ ನ್ಯಾಯ

ಒಬ್ಬ ಮೊಸರು ಮಾರುವವಳು, ಮೊಸರಿನ ಗಡಿಗೆಯನ್ನು ಕಾಯುತ್ತ ಕೂಡ್ರಲು ತನ್ನ ಮಗನಿಗೆ ಹೇಳಿ ಹೋಗುತ್ತಾಳೆ. 'ಕಾಗೆ ಬಂದೀತು, ಜೋಕೆ.'—ಎಂದು ಅವಳು ಅವನಿಗೆ ಹೇಳಿರುತ್ತಾಳೆ. ಕಾಗೆ ಬಂದರೆ ಅದನ್ನು ಹೊಡೆದೋಡಿಸುವುದು ಆ ಹುಡುಗನ ಕರ್ತವ್ಯ. ಒಂದು ವೇಳೆ ನಾಯಿ ಬಂದರೆ? ಅದನ್ನು ಓಡಿಸುತ್ತಾನೆ ಅವನು. 'ನಾಯಿಯನ್ನು ಓಡಿಸಲು ನನ್ನ ತಾಯಿ ಹೇಳಿಲ್ಲ'ವೆಂದು ಅವನು ಕೈಕಟ್ಟಿ ಕೂಡ್ರುವುದಿಲ್ಲ. ಆದುದರಿಂದ, ಇಲ್ಲಿ ಕಾಗೆ ಎಂದರೆ— 'ಮೊಸರನ್ನು ಅಪಹರಿಸುವ ಎಲ್ಲ ಪ್ರಾಣಿಗಳೆ'ಂದು ತಿಳಿಯಬೇಕು. ಯಾವದಾದರೊಂದು ವಿಷಯವನ್ನು ಹೇಳುವಾಗ, ಬುದ್ಧಿಯ ಮಾತು ಹೇಳುವಾಗ ಪ್ರತಿಯೊಂದು ಅಂಶವನ್ನೂ ವಿಂಗಡಿಸಿ ಹೇಳುವುದು ಒಮ್ಮೊಮ್ಮೆ ಸಾಧ್ಯವಾಗುವುದಿಲ್ಲ. ಹೇಳುವವರ ಮುಖ್ಯ ಉದ್ದೇಶವೇನೆಂಬುದನ್ನು ತಿಳಿದುಕೊಳ್ಳಬೇಕು. ತಾತ್ಪರ್ಯಕ್ಕನು-

ಸರಿಸಿ ಮಾತಿನ ಅರ್ಥವನ್ನು ಮಾಡಿಕೊಳ್ಳಬೇಕು. ಇದು ಲೋಕಜ್ಞಾನ-ವ್ಯವಹಾರಜ್ಞಾನ.



## ೨೯. ಕಾಕಾಕ್ಷಿಗೋಲಕ ನ್ಯಾಯ

ಕಾಗೆಗೆ ಒಂದೇ ಕಣ್ಣುಗುಡ್ಡೆ ಇರುತ್ತದೆಂದೂ, ಅದು ಸಂದರ್ಭಕ್ಕನುಸರಿಸಿ ಎರಡೂ ಕಣ್ಣುಗಳಿಗೂ ಸರಿದಾಡುವದೆಂದೂ ವಾಡಿಕೆಯ ಮಾತುಂಟು. ಒಂದು ವಾಕ್ಯದಲ್ಲಿರುವ ಒಂದು ಶಬ್ದವು ಆ ವಾಕ್ಯದ ಎರಡು ಭಾಗಗಳಿಗೂ ಸಂಬಂಧಿಸಿರುವಾಗ ಈ ನ್ಯಾಯದ ಉಪಯೋಗ ಮಾಡುತ್ತಾರೆ. ತುಸು ಅರ್ಥಭೇದದಿಂದ ಇದನ್ನು ಕಾಮಂದಕ ನೀತಿ ಶಾಸ್ತ್ರದಲ್ಲಿ ಪ್ರಯೋಗಿಸಿದ್ದಾರೆ. "ಪರಸ್ಪರ ಶತ್ರುಗಳಾದ ಎರಡು ಬಲಿಷ್ಠ ರಾಷ್ಟ್ರಗಳಿದ್ದಾಗ, ಅಶಕ್ತ ರಾಷ್ಟ್ರದವರು ಯಾವ ರಾಷ್ಟ್ರದ ಕಡೆಗೂ ಸೇರಕೂಡದು. ಅವರು ಇಬ್ಬರೊಡನೆಯೂ ಸ್ನೇಹಿತರಾಗಿ ಮಾತನಾಡುತ್ತ 'ಕಾಕಾಕ್ಷಿಗೋಲ ನ್ಯಾಯ'ದಂತೆ ವರ್ತಿಸಬೇಕು."



## ೩೦. ಕಾಶಕುಶಾವಲಂಬನ ನ್ಯಾಯ

ಕಾಶವೆಂದರೆ ಒಂದು ಬಗೆಯ ಹುಲ್ಲು. ಕುಶವೆಂದರೆ ದರ್ಭೆ. ನದಿಯ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗುತ್ತಿರುವ ಮನುಷ್ಯನು ಒಂದು ಹುಲ್ಲು-ಕಡ್ಡಿ ಸಿಕ್ಕರೂ, ಅದನ್ನು ಹಿಡಿದುಕೊಳ್ಳುವನು. ಆ ಹುಲ್ಲುಕಡ್ಡಿಯು ತನಗೆ ಆಧಾರವಾದೀತೆಂದೂ, ಅದರಿಂದ ತನ್ನ ಜೀವ ಉಳಿಯಬಹುದೆಂದೂ ಅವನ ಆಶೆ. ಆದರೆ ಹುಲ್ಲು ಕೂಡ ಬುಡಸಹಿತ ಕಿತ್ತು ಇವನ ಜೊತೆಗೇ ಪ್ರವಾಹದ ಪಾಲಾಗುವುದು. ಮುಳುಗುವವನಿಗೆ ಹುಲ್ಲು ಕಡ್ಡಿಯು ಎಂದಾದರೂ ಆಧಾರವಾದೀತೆ?

ವಾದಿಯು ವಾದದಲ್ಲಿ ಸೋತು ಹೋಗುತ್ತಿರುವಾಗ, ಏನಾದರೂ ಆಶ್ರಯವಾದೀತೇನೋ ಎಂದು ಭಾವಿಸಿ ಒಂದು ಯುಕ್ತಿಯನ್ನು ಹೇಳುತ್ತಾನೆ. ಆ ಯುಕ್ತಿಯಲ್ಲಿ ಏನೂ ಹುರುಳಿಲ್ಲದ್ದರಿಂದ ಪ್ರತಿವಾದಿಯು ಅದನ್ನು ಖಂಡಿಸುತ್ತಾನೆ. ಮತ್ತು ಈ ನ್ಯಾಯವನ್ನು ಉದಾಹರಿಸುತ್ತಾನೆ. ಇದನ್ನು 'ಕುಶಕಾಶಾವಲಂಬನ ನ್ಯಾಯ'ವೆಂದು ಹೇಳುತ್ತಾರೆ.



## ೩೧. ಕಿಮಾರ್ದ್ರಕ ವಣಿಜೋ ವಹಿತ್ರಚಿಂತಯಾ

ಆರ್ದ್ರಕವೆಂದರೆ ಹಸಿಶುಂಠಿ, ವಹಿತ್ರವೆಂದರೆ ಹಡಗು. ಶುಂಠಿಯನ್ನು ಮಾರುವವನಿಗೆ ಹಡಗದ ಚಿಂತೆಯೇಕೆ? ಶುಂಠಿಯು ಒಂದು ಚಿಲ್ಲರೆ

ವ್ಯಾಪಾರದ ವಸ್ತು. ಅದರ ವ್ಯಾಪಾರಿಗೆ ಹಡಗು ಬಂದರೇನು? ಹೋದ–ರೇನು? ಅದರಂತೆ ಬಡವನಿಗೆ ಬಂಗಾರದ ಬೆಲೆ ಏರಿದರೇನು, ಇಳಿದರೇನು?



## ೩೨. ಕುಲ್ಯಾ ಪ್ರಣಯನ ನ್ಯಾಯ

'ಕುಲ್ಯಾ' ಎಂದರೆ ಕಾಲುವೆ. ಕೆರೆಗೆ ಕಾಲುವೆಯನ್ನು ತೋಡಿ ತೋಟದಲ್ಲಿಯ ಮಡಿಗಳಿಗೆ ನೀರನ್ನು ಹಾಯಿಸುತ್ತಾರೆ. ಇದರ ಮುಖ್ಯ ಉದ್ದೇಶವು ವ್ಯವಸಾಯ. ಆ ಕಾಲುವೆಯ ನೀರನ್ನು ಕುಡಿಯುವದಕ್ಕೂ ಉಪಯೋಗಿಸಬಹುದು; ಅದರಲ್ಲಿ ಬಟ್ಟೆಯನ್ನೂ ಒಗೆಯಬಹುದು; ಸ್ನಾನ-ವನ್ನೂ ಮಾಡಬಹುದು.

ಒಂದು ಕೆಲಸದ ಮುಖ್ಯ ಪ್ರಯೋಜನ ಬೇರೆ ಇದ್ದರೂ, ಆನುಷಂಗಿಕ-ವಾಗಿ ಅನೇಕ ಪ್ರಯೋಜನಗಳು ಒದಗಬಹುದು. ಅದಕ್ಕೆ ದೃಷ್ಟಾಂತ–ವಾಗಿ ಈ ನ್ಯಾಯವನ್ನು ಉಪಯೋಗಿಸುತ್ತಾರೆ.



## ೩೩. ಕೂಪಮಂಡೂಕ ನ್ಯಾಯ

"ಬಾವಿಯಲ್ಲಿರುವ ಕಪ್ಪೆಯ ನ್ಯಾಯ.—ಬಾವಿಯಲ್ಲಿರುವ ಕಪ್ಪೆಯು ತಾನಿರುವ ಬಾವಿಯೇ ಜಗತ್ತೆಂದು ಭಾವಿಸುತ್ತದೆ. ಅದಕ್ಕೆ ಹೊರಗಿನ ಜಗತ್ತಿನ ಪರಿಚಯವೇ ಇರುವುದಿಲ್ಲ.

ವಿವಿಧ ಶಾಸ್ತ್ರಜ್ಞಾನವಾಗಲಿ ಅಥವಾ ವಿಶಾಲ ಜಗತ್ತಿನ ಅನುಭವವಾಗಲಿ ಇಲ್ಲದ ಮೂಢನಿಗೆ ಈ ನ್ಯಾಯವು ಅನ್ವಯಿಸುತ್ತದೆ. ಇದೇ ರೀತಿ 'ಕೂಪಕಚ್ಛಪ' (ಬಾವಿಯಲ್ಲಿರುವ ಆಮೆ), 'ಉದುಂಬರಕ್ರಿಮಿ' (ಅತ್ತಿ ಹಣ್ಣಿನೊಳಗಿನ ಹುಳು)—ಇವೂ ಸಹ ಇದೇ ರೀತಿ ಉಪಯೋಗಿಸಲ್ಪಡುತ್ತವೆ.



## ೩೪. ಕೃತಕ್ಷೌರಸ್ಯ ನಕ್ಷತ್ರ ಪರೀಕ್ಷಾ

ಕ್ಷೌರ ಮಾಡಿಸಿಕೊಂಡ ನಂತರ, 'ಈ ದಿನ ಮುಹೂರ್ತ ಹೇಗಿದೆ?' ಎಂದು ವಿಚಾರಿಸಿದಂತೆ! ಅಥವಾ ಮದುವೆಯಾದ ಮೇಲೆ ಕನ್ಯೆಯ ಜಾತಕವನ್ನು ತಾಳೆ ನೋಡಿದಂತೆ! ಇಲ್ಲವೆ ವಿವಾಹವಾದ ನಂತರ ಕನ್ಯೆಯ ಮೆಳ್ಳಗಣ್ಣನ್ನು ಪರೀಕ್ಷಿಸಿದಂತೆ! ಮೊದಲು ಮಾಡಬೇಕಾದ

ಕೆಲಸವನ್ನು ಮೊದಲೇ ಮಾಡಬೇಕು. 'ಮುಂಚೆ ಹೋದುದಕ್ಕಾಗಿ ಚಿಂತಿಸಿ ಫಲವಿಲ್ಲ' ಎಂಬುದನ್ನು ಈ ನ್ಯಾಯವು ಬೋಧಿಸುತ್ತದೆ.



## ೩೫. ಕ್ಷೀರ-ನೀರ ನ್ಯಾಯ

ಹಾಲು, ನೀರುಗಳಿಗೆ ಒಳ್ಳೆಯ ಮೈತ್ರಿ! ಒಂದರಲ್ಲೊಂದು ಚೆನ್ನಾಗಿ ಹೊಂದಿಕೊಳ್ಳುತ್ತವೆ. ಈ ನ್ಯಾಯವನ್ನು ಅನ್ಯೋನ್ಯ ಹೊಂದಾಣಿಕೆಯನ್ನು ಸೂಚಿಸುವುದಕ್ಕೆ ಉಪಯೋಗಿಸುತ್ತಾರೆ.

ಮಿಶ್ರಣದಲ್ಲಿ ಸಂಸೃಷ್ಟಿ, ಸಂಕರ ಎಂದು ಎರಡು ಪ್ರಕಾರಗಳು. ಎರಡು ವಸ್ತುಗಳು ಸೇರಿಕೊಂಡಾಗ, ಅವು ಬೇರೆಬೇರೆಯೆಂದು ಭೇದವು ಕಂಡುಬರುತ್ತಿದ್ದರೆ, ಅದು ಸಂಸೃಷ್ಟಿಯೆನಿಸುವುದು. ಉದಾ— ಎಳ್ಳು, ಅಕ್ಕಿಗಳ ಮಿಶ್ರಣ. ಇದಕ್ಕೆ 'ತಿಲ ತಂಡುಲ ನ್ಯಾಯ'ವೆಂದು ಹೆಸರು. ಯಾವ ಭೇದವೂ ತೋರದಿದ್ದರೆ ಅದು 'ಕ್ಷೀರನೀರ ನ್ಯಾಯ'ವಾಗಿ ಸಂಕರವೆನಿಸುತ್ತದೆ.



## ೩೬. ಗಂಡಸ್ಯೋಪರಿಪಿಟಕಃ ಸಂವೃತ್ತಃ

ಹುಣ್ಣಿನ (ಗಂಡ) ಮೇಲೆ ಬೊಕ್ಕೆ (ಪಿಟಕ) ಎದ್ದ ಹಾಗೆ. ಕಷ್ಟದ ಮೇಲೆ ಕಷ್ಟ, ಒದಗಿದಾಗ ಈ ನ್ಯಾಯವನ್ನು ಉಪಯೋಗಿಸುತ್ತಾರೆ "ಹುಣ್ಣಿನ ಮೇಲೆ ಬರೆ ಕೊಟ್ಟ ಹಾಗೆ"— ಎಂಬ ಕನ್ನಡ ಗಾದೆ ಇದೇ ಅಭಿಪ್ರಾಯದ್ದು.



## ೩೭. ಗಡ್ಡರಿಕಾ ಪ್ರವಾಹ ನ್ಯಾಯ

'ಗಡ್ಡರಿಕಾ' ಅಂದರೆ ಕುರಿಯ ಹಿಂಡು. ಕುರಿಗಳು ಸಾಲುಗಟ್ಟಿ ಪ್ರವಾಹದಂತೆ ಸಾಗುತ್ತವೆ. ಮುಂದಿನ ಕುರಿಯು ಹಳ್ಳಕ್ಕೆ ಬಿದ್ದರೆ ಹಿಂದಿನದೂ ಬೀಳುತ್ತದೆ. ಸ್ವಬುದ್ಧಿಯಿಂದ ವಿಚಾರ ಮಾಡದೆ, ಮೂಢತನದಿಂದ ಇನ್ನೊಬ್ಬರನ್ನು ಅನುಕರಿಸುವುದನ್ನು ವರ್ಣಿಸಲು ಈ ನ್ಯಾಯವನ್ನು ಉಪಯೋಗಿಸುತ್ತಾರೆ. 'ಅಂಧಪರಂಪರಾ ನ್ಯಾಯ' ದಂತೆಯೇ ಇದರ ಉಪಯೋಗ.



# ೩೮. ಗುಡಜಿಹ್ವಿಕಾ ನ್ಯಾಯ

ಮಕ್ಕಳಿಗೆ ಔಷಧವನ್ನು ಕುಡಿಸುವಾಗ, ಮೊದಲು ಬೆಲ್ಲವನ್ನು ನೆಕ್ಕಿಸುವುದುಂಟು. ನಾಲಿಗೆಯಿಂದ ಬೆಲ್ಲವನ್ನು ಚಪ್ಪರಿಸುತ್ತ ಮಕ್ಕಳು ಕಹಿ ಔಷಧವನ್ನು ಕುಡಿಯುತ್ತವೆ. ಇದರಿಂದ ಮಕ್ಕಳಿಗೆ ಔಷಧವು ಸಿಹಿಯಾಗಿದೆ ಎಂಬ ಕಲ್ಪನೆಯೂ, ನಾಲಿಗೆಗೆ ಅದರ ಕಹಿ ಕಡಿಮೆಯಾದಂತೆನಿಸುವುದೂ ಅದಕ್ಕೆ ಕಾರಣ.

ಪೂಜೆ-ಪುರಸ್ಕಾರ, ಉಪಾಸನೆ ಮುಂತಾದ ಪವಿತ್ರ ಕಾರ್ಯಗಳಿಗೆ ಶಾಸ್ತ್ರದಲ್ಲಿ ಅನೇಕ ಫಲಗಳನ್ನು ಹೇಳಿರುತ್ತಾರೆ. ಆದರೆ, ವಾಸ್ತವವಾಗಿ ಎಲ್ಲ ಫಲಗಳೂ ದೊರೆಯುವುದಿಲ್ಲ. ಫಲಶ್ರುತಿಗಳು ಗುಡಜಿಹ್ವಿಕಾ ನ್ಯಾಯದಿಂದ ಹೊರಟಿವೆಯೆಂದು ತಿಳಿಯಬೇಕು.

ಕಾವ್ಯಪ್ರದೀಪದಲ್ಲಿ ಕಾವ್ಯಪ್ರಯೋಜನವನ್ನು ಹೇಳುತ್ತ ಹೀಗೆ ಬರೆದಿರುತ್ತಾರೆ: "ಸುಕುಮಾರ ಮತಿಗಳೂ, ಸುಖಿಗಳೂ ಆದ ರಾಜಕುಮಾರರು, ಶ್ರೀಮಂತರು ಮುಂತಾದವರಿಗೆ ನೀರಸವಾದ ನೀತಿಶಾಸ್ತ್ರವನ್ನು ಬೋಧಿಸುವುದು ಸುಲಭಸಾಧ್ಯವಲ್ಲ. ಕಾವ್ಯವು ಅವರಿಗೂ ಅಭಿರುಚಿಯನ್ನು ಹುಟ್ಟಿಸಿ ಕಾಂತೆಯಂತೆ ಒಲಿಸಿಕೊಂಡು 'ಗುಡಜಿಹ್ವಿಕಾ ನ್ಯಾಯ'ದಿಂದ ಮಕ್ಕಳಿಗೆ ಔಷಧವನ್ನು ಕುಡಿಸುವಂತೆ ಹಿತೋಪದೇಶವನ್ನು ಮಾಡುತ್ತದೆ."

## ೩೯. ಗೋಬಲೀವರ್ದ ನ್ಯಾಯ

ಇಲ್ಲಿ ಗೋವೆಂದರೆ ಎತ್ತು, ಆಕಳಲ್ಲ. ಬಲೀವರ್ದವೆಂದರೂ ಎತ್ತು. "ಗೋವುಗಳನ್ನೂ ಬಲೀವರ್ದಗಳನ್ನೂ ಹೊಡೆದುಕೊಂಡು ಹೋಗು"— ಮುಂತಾದ ಪ್ರಯೋಗಗಳು ಬಳಕೆಯಲ್ಲಿವೆ. ಗೋವೆಂದರೇ ಸಾಕಾಗುತ್ತು; ಮತ್ತೆ ಬಲೀವರ್ದವೆಂದು ಹೇಳಿದ್ದೇಕೆ? ಎಂದು ಕೇಳಬಹುದು. ಈ ವಾಕ್ಯದಲ್ಲಿ ಬಲೀವರ್ದವೆಂದರೆ ವಿಶೇಷ ರೀತಿಯ ಎತ್ತೆಂದು ತಿಳಿಯಬೇಕು. ಬಹಳ ಬಲಿಷ್ಠವಾದ, ಹತ್ತಿರ ಹೋದವರನ್ನು ಹಾಯುವ ಕೊಬ್ಬಿದ ಹೋರಿಯೆಂದು ಅರ್ಥವಾಗಬಹುದು. ಯಾವದಾದರೂ ಒಂದು ವೈಶಿಷ್ಟ್ಯವನ್ನು ತೋರಿಸುವುದಕ್ಕಾಗಿ ಇಂತಹ ಪ್ರಯೋಗಗಳನ್ನು ಮಾಡುವುದುಂಟು. ಇದು ಪುನರುಕ್ತಿ ದೋಷವಲ್ಲ.

'ಬ್ರಾಹ್ಮಣ-ವಸಿಷ್ಠ ನ್ಯಾಯ', 'ಬ್ರಾಹ್ಮಣ-ಪರಿವ್ರಾಜಕ ನ್ಯಾಯ'ಗಳೂ ಇದೇ ಅರ್ಥದಲ್ಲಿ ಉಪಯೋಗಿಸಲ್ಪಡುತ್ತವೆ.



## ೪೦. ಗೋಮಯ ಪಾಯಸೀಯ ನ್ಯಾಯ

ಪಾಯಸವು ಪಯಸ್ಸಿನಿಂದ (ಹಾಲಿನಿಂದ) ಆಗುತ್ತದೆ. ಪಯಸ್ಸು (ಹಾಲು) ಹಸುವಿನಿಂದ ದೊರೆಯುತ್ತದೆ— ಎಂದರೆ ಹಸುವಿನಿಂದ ದೊರೆ-

ಯುವುದು ಪಾಯಸವೆಂದು ನಿರ್ಣಯವಾಯಿತು. ಗೋಮಯವೂ (ಸಗಣಿ) ಹಸುವಿನಿಂದ ದೊರೆಯುತ್ತದೆ. ಆದ್ದರಿಂದ ಗೋಮಯವೂ ಪಾಯಸವೇ.

ಎಂಥ ತರ್ಕಸರಣಿಯಿದು ! ಈ ಒಗೆಯ ತರ್ಕಕ್ಕೆ ಹೇತ್ವಾಭಾಸವೆನ್ನುತ್ತಾರೆ. ಹೇತ್ವಾಭಾಸದಿಂದ ಮಾಡುವ ನಿರ್ಣಯವು ಪ್ರಾಮಾಣಿಕವಲ್ಲ. ಅದನ್ನು ಅಂಗೀಕರಿಸಕೂಡದು.



## ೪೧. ಘಟಪ್ರದೀಪ ನ್ಯಾಯ

ಗಡಿಗೆಯಲ್ಲಿ ದೀಪವನ್ನಿಟ್ಟರೆ, ಅದರ ಪ್ರಕಾಶವು ಮಿತವಾಗಿರುತ್ತದೆ. ಗಡಿಗೆಯ ಒಳಭಾಗದಲ್ಲಿ ಬೆಳಕು ಬೀಳುವುದು. ಇಲ್ಲಿ ಗಡಿಗೆಯು ಹರಡುವ ಪ್ರಕಾಶವನ್ನು ತಡೆಯುವುದು. ಗಡಿಗೆಗೆ ಪ್ರತಿಬಿಂಬನ ಸಾಮರ್ಥ್ಯವಿಲ್ಲ. ಅದೇ, ದೀಪವು ಗಾಜಿನ ಮಧ್ಯದಲ್ಲಿದ್ದರೆ ಒಳಗೂ ಹೊರಗೂ ಪ್ರಕಾಶವನ್ನು ಬೀರುವುದು.

ಉದಾ :– ಲೋಭಿಯ ಹಣ. ಅವನ ಹಣ ಅವನಿಗೆ ಮಾತ್ರ ಉಪಯುಕ್ತ. ಪರೋಪಕಾರಕ್ಕೆ ಎಷ್ಟೂ ಇಲ್ಲ. ಉದಾರ ಮನುಷ್ಯನ ಹಣವು ಗಾಜಿನ ದೀಪದಂತೆ ಉಜ್ವಲವಾಗಿ ಪ್ರಕಾಶಿಸಿ ಇತರರಿಗೂ ಉಪಯುಕ್ತವಾಗುತ್ತದೆ.

ಈ ನ್ಯಾಯಕ್ಕೆ ಇನ್ನೊಂದು ರೀತಿಯಲ್ಲಿಯೂ ಅರ್ಥವನ್ನು ಹೇಳಿದ್ದಾರೆ. ಕತ್ತಲೆಯಲ್ಲಿ ಗಡಿಗೆಯಿದೆ. ದೀಪವನ್ನು ತಂದು ನೋಡಿದಾಗ ಗಡಿಗೆಯು ಕಾಣಿಸುತ್ತದೆ. ಗಡಿಗೆಯು ಕಂಡ ಮೇಲೆಯೂ ದೀಪದ ಪ್ರಕಾ–

ಶವು ಇದ್ದೇ ಇರುತ್ತದೆ. ಅಂದರೆ ದೀಪದ ಪ್ರಕಾಶವು ಗಡಿಗೆಯ ಜ್ಞಾನವನ್ನುಂಟು ಮಾಡಿದ ಮೇಲೆಯೂ ಮೊದಲಿನಂತೆಯೇ ಇರುವುದು. ಕಾರಣದಿಂದ (ದೀಪದಿಂದ) ಕಾರ್ಯವು (ಗಡಿಗೆ ಕಾಣುವುದು) ಹುಟ್ಟಿದ ಮೇಲೆ ಕಾರಣವು (ದೀಪ) ನಾಶವಾಗಬೇಕಾಗಿಲ್ಲ.



## ೪೨. ಘಟೀಯಂತ್ರ ನ್ಯಾಯ

ಬಾವಿಯ ನೀರನ್ನು ತೋಟ, ಗದ್ದೆಗಳಿಗೆ ಬಿಡುವುದಕ್ಕಾಗಿ ಬಾವಿಗಳಿಗೆ ಒಂದು ಬಗೆಯ ಘಟಚಕ್ರ (ಗಡಗಡೆ) ವನ್ನು ಜೋಡಿಸಿರುತ್ತಾರೆ. ಅದು ತಿರುಗುತ್ತಿರುವಾಗ ಕಪಲಿಯು ನೀರನ್ನು ಹೊತ್ತು ಮೇಲಕ್ಕೆ ತರುತ್ತದೆ. ನೀರನ್ನು ಚೆಲ್ಲಿ ಪೂರ್ಣ ಬರಿದಾಗಿ ಮತ್ತೆ ಕೆಳಗೆ ಇಳಿಯುತ್ತದೆ ಹೀಗೆ ಸುತ್ತಾಟ (ಏರುವುದು, ಇಳಿಯುವುದು) ತಪ್ಪುವದೇ ಇಲ್ಲ.

ಇದೇ ರೀತಿಯಲ್ಲಿ ಜೀವಾತ್ಮರು ಸಂಸಾರಚಕ್ರದಲ್ಲಿ ಸುತ್ತುತ್ತಿರುತ್ತಾರೆ. ಹುಟ್ಟುವುದು, ಸಾಯುವುದು ನಡೆದೇ ಇರುತ್ತದೆ. ಜನನದಿಂದ ಮರಣ, ಮರಣದಿಂದ ಜನನ....ಹೀಗೆ. ಘಟಚಕ್ರದ ಪಾತ್ರೆಯು (ಕಪಲಿ) ನೀರನ್ನು ಹೊತ್ತು ಭೂಮಿಗೆ ಬರುವಂತೆ, ಪುಣ್ಯ-ಪಾಪಗಳೆಂಬ ಪ್ರಾರಬ್ಧ ಕರ್ಮವನ್ನು ಹೊತ್ತು ನಾವು ಭೂಮಿಯಲ್ಲಿ ಜನಿಸುತ್ತೇವೆ. ಆ ಪಾತ್ರೆಯು ನೀರನ್ನು ಸುರಿದ ನಂತರ ಪುನಃ ಕೆಳಗಿಳಿಯುವಂತೆ, ಪ್ರಾರಬ್ಧ ಕರ್ಮದ ಭೋಗವು ಮುಗಿದ ಕೂಡಲೆ ಮರಣ ಹೊಂದುತ್ತೇವೆ. ಪುನಃ ಸಂಚಿತ-ಕರ್ಮದಿಂದ ಜನಿಸುತ್ತೇವೆ. ಇದೇ 'ಘಟೀಯಂತ್ರ ನ್ಯಾಯ'ವು.

ಮನುಷ್ಯನ ಜೀವನದಲ್ಲಿ ಆಗುವ ಏರುಪೇರುಗಳಿಗೂ, ಸುಖ-ದುಃಖ-ಗಳಿಗೂ ಉದಾಹರಣೆಯಾಗಿ ಈ ನ್ಯಾಯವನ್ನು ಉಪಯೋಗಿಸಬಹುದು.



## ೪೩. ಘಟ್ಟಕುಟೀ ಪ್ರಭಾತ ನ್ಯಾಯ

'ಘಟ್ಟಕುಟೀ'ಯೆಂದರೆ ಸುಂಕದ ಕಟ್ಟೆ. ಒಬ್ಬನು ಸರಕುತುಂಬಿದ ಎತ್ತಿನಗಾಡಿಯನ್ನು ಹೊಡೆದುಕೊಂಡು ಪ್ರಯಾಣ ಮಾಡುತ್ತಿದ್ದನು. ಮಾರ್ಗ-ದಲ್ಲಿ ಒಂದು ಸುಂಕದ ಕಟ್ಟೆ ಇತ್ತು; ಆಗ ರಾತ್ರಿಯಾಗಿತ್ತು. ಸುಂಕ ಕೊಡುವುದನ್ನು ತಪ್ಪಿಸಲು ಒಂದು ಉಪಾಯವನ್ನು ಯೋಜಿಸಿದನು: ಸುಂಕದ ಕಟ್ಟೆಯು ತುಸು ದೂರದಲ್ಲಿರುವಾಗಲೇ ತನ್ನ ಗಾಡಿಯನ್ನು ಮಾರ್ಗದಿಂದ ಅಡ್ಡದಾರಿಗೆ ಹೊಡೆಯುವದು. ಸುಂಕದ ಕಟ್ಟೆಯ ಹಿಂದಿನ ಭಾಗದಿಂದ ಮರೆಯಾಗಿ ಹೋಗಿ, ಸುಂಕದ ಕಟ್ಟೆ ದಾಟಿದ ಮೇಲೆ ಮತ್ತೆ ಮಾರ್ಗಕ್ಕೆ ಹತ್ತುವುದು! ಸರಿ, ಹಾಗೆಯೇ ಮಾಡಿದನು. ಆದರೆ ಕತ್ತಲೆಯಲ್ಲಿ ದಾರಿ ತಪ್ಪಿತು. ರಾತ್ರಿಯೆಲ್ಲ ಕಾಡಿನಲ್ಲಿ ಸುತ್ತಾಡಿದನು. ಬೆಳಗಾಗುವ ವೇಳೆಗೆ ಸರಿಯಾಗಿ ಸುಂಕದ ಕಟ್ಟೆಯ ಬಾಗಿಲಿಗೇ ಬಂದಿ-ದನು! ಎಷ್ಟು ಪರಿಶ್ರಮಬಟ್ಟರೂ, ಅದು ವ್ಯರ್ಥವಾಗಿ ಉದ್ದೇಶವು ಸಿದ್ಧಿಸದೆ ಹೋದಾಗ, ಈ ನ್ಯಾಯವನ್ನು ಉಪಯೋಗಿಸುತ್ತಾರೆ.



## ೪೪. ಘುಣಾಕ್ಷರ ನ್ಯಾಯ

'ಘುಣಾ' ಎಂದರೆ ಮರವನ್ನು (ಕಟ್ಟಿಗೆ) ಕೊರೆಯುವ ಒಂದು ಹುಳು. ಮನೆಯಲ್ಲಿ ಕಂಬಗಳನ್ನೂ, ತೊಲೆಗಳನ್ನೂ ಕೊರೆದು ಈ ಹುಳು ರೇಖೆಗಳನ್ನುಂಟು ಮಾಡುತ್ತದೆ. ಈ ರೇಖೆಗಳು ಕೂಡಿ ಒಮ್ಮೊಮ್ಮೆ ಅಕ್ಷರದಂತೆ ಕಾಣುತ್ತದೆ. 'ಅ' ಕಾರವನ್ನೋ 'ಉ' ಕಾರವನ್ನೋ ಅಥವಾ ಬೇರೊಂದು ಅಕ್ಷರವನ್ನೋ ಅದು ಹೋಲಬಹುದು. ಹುಳುವಿಗೆ ಅಕ್ಷರ-ವನ್ನು ಬರೆಯುವ ಉದ್ದೇಶವೇನೂ ಇರಲು ಸಾಧ್ಯವಿಲ್ಲ!

ಹೀಗೆ ಯಾವುದೋ ಒಂದು ಕಾರ್ಯ ಮಾಡುವಾಗ, ಉದ್ದೇಶ-ವಿಲ್ಲದಿದ್ದರೂ ಆಕಸ್ಮಿಕವಾಗಿ ಮತ್ತೊಂದು ಕಾರ್ಯವು ಘಟಿಸಿ, ಅದು ಉದ್ದೇಶಪೂರ್ಣವೋ ಎಂಬಂತೆ ಕಾಣುವುದು. ಅಂಥ ಕಾರ್ಯವನ್ನು ವಿವರಿಸುವಾಗ ಈ ನ್ಯಾಯದ ಉಪಯೋಗ.



## ೪೫. ಚಂದ್ರ–ಚಂದ್ರಿಕಾ ನ್ಯಾಯ

ಚಂದ್ರನ ಪ್ರಕಾಶವೇ ಚಂದ್ರಿಕೆ—ಬೆಳದಿಂಗಳು. ಚಂದ್ರನನ್ನು ಬಿಟ್ಟು ಚಂದ್ರಿಕೆಯಿಲ್ಲ. ಚಂದ್ರಿಕೆಯನ್ನು ಬಿಟ್ಟು ಚಂದ್ರನಿಲ್ಲ. ಆನೆರಡನ್ನೂ

ಅಗಲಿಸಲು ಸಾಧ್ಯವೇ ಇಲ್ಲ ಹೀಗೆ ವಸ್ತುಗಳ ಅನ್ಯೋನ್ಯತೆಯನ್ನು ಸೂಚಿಸಲು ಈ ನ್ಯಾಯವನ್ನು ಬಳಸುತ್ತಾರೆ. ಉದಾ: ಭವಾನಿಯು ಶಕ್ತಿಸ್ವರೂಪಿಣಿ; ಆವಳು ಪರಮೇಶ್ವರನ ಅರ್ಧಾಂಗಿ. ಚಂದ್ರ–ಚಂದ್ರಿಕಾ ನ್ಯಾಯದಂತೆ ಪರಮೇಶರನಲ್ಲಿರುವ ಶಕ್ತಿಯೇ ಭವಾನಿ. (ನೋ. 'ನೀರ–ಕ್ಷೀರ ನ್ಯಾಯ')



## ೪೬. ಚಿಂತಾಮಣಿಂ ಪರಿತ್ಯಜ್ಯ ಕಾಚಮಣಿ ಗ್ರಹಣ ನ್ಯಾಯ

ಚಿಂತಿಸಿದುದನ್ನು ಕೊಡುವ ಮಣಿಯು— ಚಿಂತಾಮಣಿ. ಅದು ತನಗೆ ದೊರೆತಾಗ, ಬೇಡವೆಂದು ನಿರಾಕರಿಸಿ, ಕಾಜಿನ ಮಣಿಯನ್ನು ತೆಗೆದುಕೊಳ್ಳುವುದು ಮೂರ್ಖತನದ ಲಕ್ಷಣ.



## ೪೭. ಚಿತ್ರಾಂಗನಾ ನ್ಯಾಯ

ಚಿತ್ರದಲ್ಲಿಯ ಸುಂದರಾಂಗಿಯನ್ನು ನೋಡಿ ಬಾಯ್ಬಿಟ್ಟರೆ ಏನು ಬಂತು? ಸತ್ಯವಾಗಿ ಕಂಡರೂ, ವಾಸ್ತವವಾಗಿ ಯಾವುದು ಇಲ್ಲವೋ

ಅದನ್ನು ವರ್ಣಿಸಲು ಈ ನ್ಯಾಯವನ್ನು ಉದಾಹರಿಸುವರು. ಚಿತ್ರದಲ್ಲಿಯ ಅಗ್ನಿಯು ಏನನ್ನೂ ಸುಡಲಾರದು. 'ಚಿತ್ರಾನಲ ನ್ಯಾಯ'ವನ್ನೂ ಇದೇ ಅರ್ಥದಲ್ಲಿ ಉಪಯೋಗಿಸುವರು.



## ೪೮. ಚೌರಾಪರಾಧಾನ್ಮಾಂಡವ್ಯ ನಿಗ್ರಹ

ಯಾರದೋ ಅಪರಾಧಕ್ಕಾಗಿ ಯಾರಿಗೋ ಶಿಕ್ಷೆ ಕೊಡಲ್ಪಟ್ಟಾಗ ಬಳಸುವ ನ್ಯಾಯವಿದು. ಮಹಾಭಾರತ ಕಥೆಯಲ್ಲಿ ಮಾಂಡವ್ಯಮುನಿಗೆ ಅನವಶ್ಯಕ ದಂಡನೆಯಾದ ಕಥೆ ಬರುತ್ತದೆ. ಅವನು ತಪಸ್ಸಿನಲ್ಲಿ ಮೈ-ಮರೆತಾಗ, ಕೆಲವು ಕಳ್ಳರು ತಮ್ಮನ್ನು ಅಟ್ಟಿಸಿಕೊಂಡು ಬರುತ್ತಿದ್ದ ರಾಜಭಟರಿಂದ ತಪ್ಪಿಸಿಕೊಳ್ಳಲು, ತಾವು ಕದ್ದು ತಂದ ಒಡವೆಗಳನ್ನು ಮಾಂಡವ್ಯ ಮುನಿಯ ಆಶ್ರಮದಲ್ಲಿ ಬಚ್ಚಿಟ್ಟು ತಲೆಮರೆಸಿಕೊಳ್ಳುವರು. ರಾಜದೂತರಿಗೆ ಕಳವಿನ ಮಾಲು ಮಾಂಡವ್ಯ ಮುನ್ಯಾಶ್ರಮದಲ್ಲಿ ದೊರೆತದ್ದ-ರಿಂದ, ಮಾಡವ್ಯ ಮುನಿಯನ್ನು ಶೂಲಕ್ಕೇರಿಸುತ್ತಾರೆ. ಹೀಗೆ ಅಪರಾಧಿ-ಗಳು ದೊರಕದಿದ್ದಾಗ ನಿರಪರಾಧಿಗೆ ದಂಡನೆಯಾಗುವ ವಿಚಿತ್ರವಾದ್ದ ನ್ಯಾಯವಿದು.

## ೪೯. ಛಾಯಾ ಪಿಶಾಚಿ ನ್ಯಾಯ

ತಮ್ಮ ನೆರಳನ್ನೇ ಪಿಶಾಚಿಯೆಂದು ಭ್ರಮಿಸಿ ಹೆದರುವುದುಂಟು. ಅದು ಅವರದೇ ನೆರಳೆಂದು ಅನ್ಯರಿಂದ ತಿಳಿ ಹೇಳಲ್ಪಟ್ಟಾಗ, ಭ್ರಮನಿರಸನವಾಗಿ ಹೆದರಿಕೆ ತೊಲಗುವುದು. ಅನಾವಶ್ಯಕವಾದ ಭಯವನ್ನು ಹೋಗಲಾಡಿಸಬೇಕಾದ ಈ ಸಂದರ್ಭದಲ್ಲಿ ಈ ನ್ಯಾಯವನ್ನು ಉಪಯೋಗಿಸುವರು.



## ೫೦. ಜ್ವರಹರ ತಕ್ಷಕರತ್ನ ನ್ಯಾಯ

ತಮ್ಮ ಚಿಕಿತ್ಸೆಯಿಂದ ರೋಗವನ್ನು (ಜ್ವರ) ಗುಣಪಡಿಸುವುದು ಅಸಾಧ್ಯವಾದಾಗ, ಕೆಲ ವೈದ್ಯರು ಅಲಭ್ಯವಾದ ಒಂದು ಔಷಧವನ್ನು ತರಿಸಲು ಹೇಳುತ್ತಾರೆ. ಉದಾ: "ಪಾತಾಳ ಲೋಕದಲ್ಲಿರುವ ತಕ್ಷಕನೆಂಬ ಸರ್ಪದ ಹೆಡೆಯಲ್ಲಿಯ ರತ್ನವನ್ನು ತರಿಸಿದರೆ ಈ ರೋಗವನ್ನು ಖಂಡಿತ ಗುಣಪಡಿಸುತ್ತೇನೆ !"

ಅಸಾಧ್ಯವಾದ ಕೆಲಸವನ್ನು ಹೇಳಿ, ತಾನು ತಪ್ಪಿಸಿಕೊಳ್ಳುವ ಜಾಣತನವನ್ನು ವರ್ಣಿಸುವ ನ್ಯಾಯವಿದು. ತಮ್ಮ ಚಿಕಿತ್ಸೆಯಿಂದ ಒಂದೊಮ್ಮೆ

ಗುಣವಾದರೆ ಇಂಥ ವೈದ್ಯರು ತಮ್ಮ ಪಾಂಡಿತ್ಯದ ಬಗೆಗೆ ಜಂಬಕೊಚ್ಚಿ-ಕೊಳ್ಳುತ್ತಾರೆ; ಗುಣಚಾರದಿದ್ದರೆ ಪಥ್ಯವನ್ನು ಸರಿಯಾಗಿ ಪಾಲಿಸಲಿಲ್ಲವೆಂದು, ತಪ್ಪನ್ನು ರೋಗಿಗಳ ಮೇಲೆಯೇ ಹೊರಿಸುತ್ತಾರೆ.



## ೫೧. ಡಮರುಕಮಣಿ ನ್ಯಾಯ (ಮಧ್ಯಮಣಿ ನ್ಯಾಯ)

ಬುಡಬುಡಿಕೆಗೆ ದಾರವನ್ನು ಕಟ್ಟಿ, ಅದರ ತುದಿಯಲ್ಲಿ ಒಂದು ಮಣಿಯನ್ನು ಕಟ್ಟಿರುತ್ತಾರೆ. ಬುಡಬುಡಿಕೆಯವನ ಕೈಚಾಲಾಕಿಯಿಂದ ಆ ಒಂದೇ ಮಣಿಯು ಬುಡಬುಡಿಕೆಯ ಎರಡೂ ಭಾಗಗಳಿಗೆ ತಾಕಿ 'ಬುಡು ಬುಡು' ಶಬ್ದ ಮಾಡುತ್ತದೆ.

ಒಂದೇ ವಸ್ತು ಒಂದೇ ಕಾಲಕ್ಕೆ ಎರಡು ಕಾರ್ಯಗಳಿಗೆ ಉಪ-ಯೋಗವಾದಾಗಲೂ, ಒಂದೇ ಶಬ್ದವು ಎರಡು ಎಡೆಗಳಲ್ಲಿ ಅನ್ವಯಿಸಿದಾ-ಗಲೂ ಈ ನ್ಯಾಯವನ್ನು ಉಪಯೋಗಿಸುತ್ತಾರೆ. 'ಮಧ್ಯಮಣಿ ನ್ಯಾಯ' ವೆಂಬುದೂ ಈ ಅರ್ಥದಲ್ಲಿಯೇ ಬಳಸಲ್ಪಡುತ್ತದೆ.

## ೫೨. ತಪ್ತಂ ತಪ್ತೇನ ಸಂಬಧ್ಯತೇ

ಕಾಯ್ದ ಲೋಹವು ಕಾಯ್ದ ಲೋಹದೊಂದಿಗೆ ಬೆಸುಗೆ ಹೊಂದುತ್ತದೆ. ಒಂದೇ ಸ್ವಭಾವದ ಜನರಲ್ಲಿ ಬಾಂಧವ್ಯ-ಅನ್ಯೋನ್ಯತೆ ತಲೆದೋರುತ್ತದೆ. ಅಂದರೆ ಪರಸ್ಪರ ಆವಶ್ಯಕತೆ ಇದ್ದವರಲ್ಲಿ ಮಾತ್ರ ಗೆಳೆತನ ಕುದುರುತ್ತದೆ. 'ಸಮಾನ ಶೀಲೇ ವ್ಯಸನೇಷು ಸಖ್ಯಂ'— ಈ ಗಾದೆಯೂ ಇದೇ ಅರ್ಥದಲ್ಲಿ ಉಪಯೋಗಿಸಲ್ಪಡುತ್ತದೆ. ಉದಾ:— ವಿದ್ವಾಂಸರಿಗೆ ವಿದ್ವಾಂಸರ ಗೆಳೆತನ; ಕುಡುಕನಿಗೆ ಕುಡುಕನ ಗೆಳೆತನ; ಕಳ್ಳನಿಗೆ ಕಳ್ಳನೊಡನೆ ಗೆಳೆತನ—ಇತ್ಯಾದಿ. ಒಂದೇ ಸ್ವಭಾವದವರು ಗೆಳೆತನ ಬೆಳೆಸಿದಾಗ ಉಪಯೋಗಿಸುವ ನ್ಯಾಯವಿದು.



## ೫೩. ತಪ್ತಾಯಃ ಪೀತಾಂಬು ನ್ಯಾಯ

ಚೆನ್ನಾಗಿ ಕಾಯಿಸಿದ ಕಬ್ಬಿಣದ ಮೇಲೆ ನೀರನ್ನು ಚಿಮುಕಿಸಿದರೆ, ನೀರು ಹೇಳ ಹೆಸರಿಲ್ಲದಂತೆ ಆರಿ ಹೋಗುತ್ತದೆ. ಹೀಗೆಯೇ, ತನ್ನ ಶಕ್ತಿಯನ್ನರಿಯದೆ, ಬಲಿಷ್ಠ ರಾಷ್ಟ್ರದ ಮೇಲೆ ದಾಳಿ ಮಾಡುವ ರಾಷ್ಟ್ರವೂ ನಾಶನಾಗುವುದು—ನಾಮಶೇಷವಾಗುವುದು.

ಬಲಿಷ್ಠನ ಮೇಲೆ ಅಶಕ್ತನು ಕೈ ಮಾಡಿದಾಗ ಹೇಳುವ ನ್ಯಾಯವಿದು.



## ೫೪. ತಮೋದೀಪ ನ್ಯಾಯ

ದೀಪವನ್ನು ಹಿಡಿದುಕೊಂಡು ಕತ್ತಲೆಯನ್ನು ಅರಸುತ್ತ ಹೋದರೆ ಅದು ಸಿಗುವುದೇ? ಕತ್ತಲೆಗೂ ದೀಪಕ್ಕೂ ವಿರೋಧ. ಹೀಗೆ ತೀರ ವಿರುದ್ಧವಾದ ಸಾಧನದಿಂದ ಯಾವುದೇ ಕಾರ್ಯವನ್ನು ಮಾಡಲು ಯತ್ನಿಸಿದಾಗ ಈ ನ್ಯಾಯವನ್ನು ಉಪಯೋಗಿಸಲಾಗುತ್ತದೆ



## ೫೫. ತಿಲತಂ-ಡುಲ ನ್ಯಾಯ

ಅಕ್ಕಿಯೊಡನೆ ಎಳ್ಳನ್ನು ಬೆರಸಿದರೆ ಗುರುತಿಸುವುದು ಹಗುರು ಅವೆರಡರ ಭೇದವು ಸ್ಪಷ್ಟವಾಗಿ ಎದ್ದು ಕಾಣುವುದು. ಮಿಶ್ರಿತ ವಸ್ತುಗಳು ಸ್ಪಷ್ಟವಾಗಿ ಗೊತ್ತಾಗುವಂತೆ ಇದ್ದಾಗ ಈ ನ್ಯಾಯವನ್ನು ಉಪಯೋಗಿಸುತ್ತಾರೆ.

ಈ ರೀತಿಯಾಗಿ ಕಾವ್ಯದಲ್ಲಿ ಅನೇಕ ಅಲಂಕಾರಗಳು ಮಿಲಿತವಾದರೆ ಅಲಂಕಾರ ಸಂಸೃಷ್ಟಿ ಎಂದು ಅಲಂಕಾರಶಾಸ್ತ್ರಜ್ಞರು ಹೇಳುತ್ತಾರೆ.

ಉದಾ— ರಾತ್ರಿಯ ವರ್ಣನೆ :

ಲಿಂಪತೀವ ತಮೋಽಙ್ಗಾನಿ ವರ್ಷತೀವಾಂಜನಂ ನಭಃ |
ಅಸತ್ ಪುರುಷ ಸೇವೇವ ದೃಷ್ಟಿರ್ವಿಫಲತಾಂ ಗತಾ ||

ಅರ್ಥ — ಕತ್ತಲೆಯು ಅವಯವಗಳನ್ನೆಲ್ಲ ಲೇಪಿಸುತ್ತಿದೆಯೋ ಎಂಬಂತೆ ತೋರುತ್ತದೆ. ಆಕಾಶವು ಕಾಡಿಗೆಯನ್ನು ಸುರಿಸುತ್ತಿದೆಯೋ ಎಂಬಂತೆ ತೋರುತ್ತದೆ. ದುಷ್ಟರ ಸೇವೆಯಂತೆ ಕಣ್ಣು ನಿಷ್ಫಲವಾಗಿದೆ.

ಮೊದಲನೆಯ ಎರಡು ವಾಕ್ಯಗಳಲ್ಲಿ ಉತ್ಪ್ರೇಕ್ಷಾಲಂಕಾರವೂ, ಕೊನೆಯ ವಾಕ್ಯದಲ್ಲಿ ಉಪಮಾಲಂಕಾರವೂ ಸ್ಫುಟವಾಗಿ ತೋರುತ್ತವೆ.

ಪರಸ್ಪರ ಭೇದವು ಗೊತ್ತಾಗದಂತೆ ವಸ್ತುಗಳು ಮಿಳಿತವಾದರೆ 'ನೀರಕ್ಷೀರ ನ್ಯಾಯ'ವನ್ನು ಉಪಯೋಗಿಸುತ್ತಾರೆ.



## ೫೬. ತುಲೋನ್ನಮನ ನ್ಯಾಯ

ತುಲಾ=ತಕ್ಕಡಿ; ಉನ್ನಮನ=ಎತ್ತುವುದು— ತಕ್ಕಡಿಯನ್ನು ಎತ್ತುವುದು. ತಕ್ಕಡಿಯ ಒಂದು ಭಾಗವನ್ನು (ಪರಡಿ) ಮೇಲೆ ಎತ್ತಿದರೆ, ಇನ್ನೊಂದು ಭಾಗವು ಕೆಳಗೆ ಇಳಿಯುವುದು. ಇನ್ನೊಂದು ಪರಡಿಯನ್ನು ಕೆಳಕ್ಕಿಳಿಸದೆ, ಒಂದು ಭಾಗವನ್ನು ಮೇಲಕ್ಕೇರಿಸಲು ಸಾಧ್ಯವಿಲ್ಲ. ಕೆಳಕ್ಕಿಳಿಸಲು ಬೇರೆ ಪ್ರಯತ್ನವೂ ಬೇಕಾಗಿಲ್ಲ. ಒಂದೇ ಪ್ರಯತ್ನದಿಂದ ಎರಡೂ ಕಾರ್ಯಗಳು ನಡೆಯುವುವು.

ಒಬ್ಬನಿಗೆ ಉಪಕಾರ ಮಾಡುವುದರಿಂದ ಇನ್ನೊಬ್ಬನಿಗೆ ಅಪಕಾರವೂ ಆಗುವಂತಿದ್ದರೆ, ಈ ನ್ಯಾಯವನ್ನು ಉಪಯೋಗಿಸಬಹುದು. ಒಬ್ಬರನ್ನು ಹೆಚ್ಚಿನ ಪದವಿಗೇರಿಸಿದರೆ, ಇನ್ನೊಬ್ಬರು ಆ ಸ್ಥಾನದಿಂದ ಕೆಳಗಿಳಿಯ ಬೇಕಾಗುವುದು. ಇದಕ್ಕೆ ತುಲೋನ್ನಮನ ನ್ಯಾಯವೆನ್ನುವರು.



## ೫೭. ತುಷಕಂಡನ ನ್ಯಾಯ (ಜಲಮಂಥನನ್ಯಾಯ)

ಹೊಟ್ಟನ್ನು (ತೌಡನ್ನು) ಕುಟ್ಟುವುದರಿಂದ ಫಲವಿಲ್ಲವೆಂಬುದು ಎಲ್ಲರಿಗೂ ಗೊತ್ತಿದ್ದ ಸಂಗತಿ ಅನಗತ್ಯವಾದ ಮತ್ತು ವ್ಯರ್ಥವಾದ ಕಾರ್ಯವನ್ನು ವರ್ಣಿಸುವಾಗ ಈ ನ್ಯಾಯವನ್ನು ಬಳಸುತ್ತಾರೆ.

ಉದಾ — ಹಿತೋಪದೇಶದಲ್ಲಿಯ ಈ ಶ್ಲೋಕ :—

ಅವಿಚಾರಯತೋ ಯುಕ್ತಿಕಥನಂ ತುಷಕಂಡನಂ ।
ನೀಚೇಷೂಪಕೃತಂ ರಾಜನ್ ವಾಲುಕಾಸ್ವಿವ ಮೂತ್ರಿತಂ ॥

ಅರ್ಥ:—ವಿಚಾರಹೀನನಿಗೆ ಉಪಾಯವನ್ನು ಬೋಧಿಸುವುದು ತುಷಕಂಡನ ನ್ಯಾಯವೇ ಆಗಿದೆ. ರಾಜನೇ, ನೀಚರಿಗೆ ಉಪಕಾರಮಾಡುವುದೆಂದರೆ, ಮರಳಿನಲ್ಲಿ ಮೂತ್ರವಿಸರ್ಜನೆ ಮಾಡಿದಹಾಗೆ !



## ೫೮. ತೈಲಪಾತ್ರಧರ ನ್ಯಾಯ

ಎಣ್ಣೆ ತುಂಬಿದ ಪಾತ್ರೆಯನ್ನು ಒಬ್ಬನು ಹೊತ್ತುಕೊಂಡು ಹೋಗುತ್ತಾನೆ. ತುಂಬಿ ತುಳುಕುವಂತಿದ್ದ ಎಣ್ಣೆಯ ಒಂದು ಹನಿಯೂ ಕೆಳಗೆ ಬೀಳಬಾರದು. ಬಿದ್ದರೆ ಅವನಿಗೆ ಮರಣದಂಡನೆ ! ಇಂಥ ಪರಿಸ್ಥಿತಿಯಲ್ಲಿ

ಆತನು ತುಂಬ ಜಾಗ್ರತನಾಗಿರಬೇಕಲ್ಲವೇ ?

ಹೀಗೆ ಅತ್ಯಂತ ಜಾಗರೂಕತೆಯು ಅವಶ್ಯವಿದ್ದಾಗ ಈ ನ್ಯಾಯದ ಬಳಕೆ.



## ೫೯. ದಗ್ಧಪಟ ನ್ಯಾಯ

ಪಟ ಎಂದರೆ ಬಟ್ಟೆ. ಅದು ಅಗ್ನಿಯಲ್ಲಿ ಸುಟ್ಟುಹೋದ ಮೇಲೆಯೂ ಅದರ ಆಕಾರವು ತುಸು ಸಮಯ ಹಾಗೇ ಉಳಿದಿರುವುದು. ಅದರಂತೆ ಕಾಗದವು ಸುಟ್ಟರೂ ಅದರ ಆಕೃತಿಯೂ ಸ್ವಲ್ಪ ಕಾಲ ಕಂಡು· ಬರುವುದು

ಹೀಗೆ ಒಂದು ವಸ್ತುವು ಸಂಪೂರ್ಣ ನಾಶಹೊಂದಿ, ಅದು ಇನ್ನು ಇಲ್ಲವೆಂದು ನಿಶ್ಚಿತವಾದರೂ, ಅದು ಅತಿ ಮಸುಕಾಗಿ ಇದೆಯೋ ಎಂಬಂತೆ ತೋರುತ್ತಿದ್ದರೆ ಈ ನ್ಯಾಯವನ್ನು ಉಪಯೋಗಿಸುತ್ತಾರೆ.

ಒಂದು ಮಂತ್ರಿಮಂಡಲವು ರಾಜೀನಾಮೆ ಕೊಟ್ಟ ಬಳಿಕ, ಹೊಸ ಮಂತ್ರಿಮಂಡಲವು ಅಸ್ತಿತ್ವದಲ್ಲಿ (ಅಧಿಕಾರಕ್ಕೆ) ಬರುವವರೆಗೆ ಮೊದಲಿನ ಮಂತ್ರಿಮಂಡಲವು ರಾಜ್ಯಪಾಲರ ಸೂಚನೆಯಿಂದ ಮುಂದುವರಿಯುತ್ತದೆ. ಇಂತಹ ಮಂತ್ರಿಮಂಡಳಕ್ಕೆ ಛಾಯಾ ಸಂಪುಟ (Shadow Cabinet) ಎನ್ನುತ್ತಾರೆ. ಈ ಸಂಪುಟವು 'ದಗ್ಧಪಟ ನ್ಯಾಯ'ದಂತೆ ಇರುತ್ತದೆನ್ನ- ಬಹುದು.

ಇದರಂತೆ ವೇದಾಂತಿಗಳು, "ಆತ್ಮನಿಗೆ ಭೇದಜ್ಞಾನವು ದಗ್ಧಪಟ

ನ್ಯಾಯದಂತೆ ಆಪಾತತಃ ಇರುತ್ತದೆ; ವಸ್ತ್ರವು ಸುಟ್ಟುಹೋಗಿದ್ದರೂ "ಇದು ವಸ್ತ್ರ" ಎಂಬಂತೆ ವ್ಯವಹಾರ ಮಾತ್ರ ಉಳಿದಿರುತ್ತದೆ.— ಎಂದು ಹೇಳುತ್ತಾರೆ.



## ೬೦. ದಗ್ಧಬೀಜ ನ್ಯಾಯ

ಸುಟ್ಟುಹೋದ (ಹುರಿದ) ಬೀಜಕ್ಕೆ ಎಂದೂ ಮೊಳಕೆಯೊಡೆಯುವದಿಲ್ಲ. ಕಾರಣೀಭೂತವಾದ ಅಂಶವು ಇಲ್ಲವಾದರೆ, ಕಾರ್ಯವೆಂದಿಗೂ ಜನಿಸುವುದಿಲ್ಲ. ಕಾಲಲ್ಲಿ ಮುಳ್ಳು ನೆಟ್ಟು ನೋವಾಗಿದೆ; ಮುಳ್ಳನ್ನು ತೆಗೆದ ಮೇಲೆ ನೋವು ಇರಲು ಕಾರಣವಿಲ್ಲ. ಆದರೆ "ಚಕ್ರಭ್ರಮಣ ನ್ಯಾಯ" ದಂತೆ ಕಾಲಲ್ಲಿ ತುಸು ನೋವು ಉಳಿದಿದ್ದರೂ ಹೊಸ ನೋವು ಹುಟ್ಟಲಾರದು.

ಅದರಂತೆ, ಜೀವಿಯು ಮಾಡಿರುವ ಪಾಪ-ಪುಣ್ಯ ರೂಪವಾದ ಕರ್ಮವು ಪುನರ್ಜನ್ಮಕ್ಕೆ ಕಾರಣವಾಗುತ್ತದೆ. ಯಾಕೆಂದರೆ, ಪಾಪ-ಪುಣ್ಯಗಳನ್ನು ಅನುಭವಿಸಲೇಬೇಕು. ಅವುಗಳನ್ನು ಅನುಭವಿಸಲು ಶರೀರವು ಬೇಕು. ಆದ್ದರಿಂದಲೇ ಜೀವನು ಶರೀರವನ್ನು ಧರಿಸುತ್ತಾನೆ, ಅಂದರೆ ಹುಟ್ಟುತ್ತಾನೆ. ಕರ್ಮವು ನಾಶವಾದರೆ, ಶರೀರವೂ ಇಲ್ಲ; ಸಂಸಾರವೂ ಇಲ್ಲ.

ಉದಾ— ಸ್ಯಾದ್ವಾದಮಂಜರಿಯಲ್ಲಿ—

> ದಗ್ಧೇ ಬೀಜೇ ಯಥಾತ್ಯಂತಂ ಪ್ರಾದುರ್ಭವತಿ ನಾಂಕುರಃ ।
> ಕರ್ಮಬೀಜೇ ತಥಾ ದಗ್ಧೇ ನ ರೋಹತಿ ಭವಾಂಕುರಃ ॥

ಅರ್ಥ—ಬೀಜವು ಸುಟ್ಟುಹೋದರೆ ಮೊಳಕೆಯು ಹೇಗೆ ಹುಟ್ಟು ವುದೇ ಇಲ್ಲವೋ ಹಾಗೆ, ಕರ್ಮವೆಂಬ ಬೀಜವು ಸುಟ್ಟುಹೋದರೆ ಸಂಸಾರವೆಂಬ ಮೊಳಕೆ ಹುಟ್ಟುವುದಿಲ್ಲ.



## ೬೧. ದರಿದ್ರ ದಂಪತೀ ಕಂಬಲ ನ್ಯಾಯ

ಚಳಿಗಾಲ; ದಂಪತಿಗಳು ದರಿದ್ರರು; ಹೊದೆಯಲು ಇರುವುದು ಒಂದೇ ಕಂಬಳಿ. ಅದೂ ಸಣ್ಣದು. ಇಬ್ಬರೂ ಅದನ್ನು ಹೊದೆದು-ಕೊಳ್ಳುತ್ತಾರೆ. ಇಬ್ಬರ ಶರೀರವೂ ಸಂಪೂರ್ಣ ಮುಚ್ಚುವುದಿಲ್ಲ. ಗಂಡನು ಎಳೆದುಕೊಂಡರೆ ಹೆಂಡತಿಗೆ ಇಲ್ಲ; ಹೆಂಡತಿ ಎಳೆದುಕೊಂಡರೆ ಗಂಡನಿಗೆ ಇಲ್ಲ ! ಇಬ್ಬರಿಗೂ ಹೊದೆಯಲು ಅದು ಸಾಲದು !

ಒಬ್ಬರಿಗೆ ಉಪಕಾರ ಮಾಡಲು ಹೋದಾಗ, ಮನಸ್ಸಿಲ್ಲದಿದ್ದರೂ ಇನ್ನೊಬ್ಬರಿಗೆ ಅಪಕಾರವಾದಾಗ— ಈ ನ್ಯಾಯದ ಬಳಕೆಯಾಗುತ್ತದೆ. 'ಉಭಯತಃ ಪಾಶಾ ರಜ್ಜುಃ' ಎಂಬ ನ್ಯಾಯಕ್ಕೆ ಇದು ಹತ್ತಿರದ್ದಾಗಿದೆ.



## ೬೨. ದೇವದತ್ತಹಂತೃಹತ ನ್ಯಾಯ

ದೇವದತ್ತನ ಕೊಲೆ ಮಾಡಿದವನನ್ನು ಕೊಂದರೆ ಅಥವಾ ಗಲ್ಲಿಗೇರಿಸಿದರೆ, ಸತ್ತ ದೇವದತ್ತನು ಬದುಕಿ ಬರಲಾರನು. ಇದು ನಿಶ್ಚಿತವಾದ ಅಂಶ.

ಒಂದು ದುರ್ಘಟನೆಯು ಸಂಭವಿಸುವ ಮೊದಲೇ ಅದಕ್ಕೆ ಪರಿಹಾರವನ್ನು ಯೋಜಿಸಬೇಕು. ಅಂದರೆ ದೇವದತ್ತನನ್ನು ಕೊಲೆಮಾಡಲು ಕೈಯೆತ್ತಿದಾಗಲೇ ಆ ಕೊಲೆಗಡುಕನನ್ನು ಕೊಂದರೆ ದೇವದತ್ತನು ಬದುಕುವನು. 'ಮಿಂಚಿ ಹೋದ ಮಾತಿಗೆ ಚಿಂತಿಸಿ ಫಲವಿಲ್ಲ.' — ಎಂಬ ಗಾದೆಗೂ ಈ ನ್ಯಾಯಕ್ಕೂ ತಕ್ಕಮಟ್ಟಿಗೆ ಹೋಲಿಕೆಯಿದೆ.



## ೬೩. ದೇಹಲೀ ದೀಪ ನ್ಯಾಯ

ದೇಹಲಿಯೆಂದರೆ ಹೊಸ್ತಿಲು. ಹೊಸ್ತಿಲ ಮೇಲೆ ದೀಪವನ್ನಿಟ್ಟರೆ, ಬೆಳಕು ಒಳಗೂ ಹೊರಗೂ–ಎರಡೂ ಕಡೆಗೂ ಬೀಳುವುದು. ಹಬ್ಬದ ಮನೆಗಳಲ್ಲಿ ಈ ದೃಶ್ಯವನ್ನು ಈಗಲೂ ಕಾಣಬಹುದು. ಒಂದೇ ಪ್ರಯತ್ನದಿಂದ (ಸಾಧನ) ಎರಡು ಕೆಲಸಗಳಾಗುತ್ತಿದ್ದರೆ ಅಥವಾ ಒಂದೇ ಶಬ್ದಕ್ಕೆ

ಎರಡು ಅರ್ಥಗಳಾಗುತ್ತಿದ್ದರೆ ಈ ನ್ಯಾಯವನ್ನು ಬಳಸುತ್ತಾರೆ 'ಕಾಕಾಕ್ಷಿ-ಗೋಲಕ ನ್ಯಾಯ' ದಂತೆಯೇ ಇದರ ಉಪಯೋಗ.



## ೬೪. ಧಾನ್ಯ ಪಲಾಲ ನ್ಯಾಯ

ಪಲಾಲವೆಂದರೆ ಹೊಟ್ಟು. ಗೋದಿ, ಜೋಳ, ಭತ್ತ ಮುಂತಾದ ಕಾಳುಗಳ ಮೇಲೆ ಹೊಟ್ಟು (ತೌಡು) ಇರುತ್ತದೆ. ತೌಡು ತಿನ್ನಲು ಅನರ್ಹವೆಂದು ಕಾಳನ್ನು ಯಾರೂ ಒಗೆಯುವುದಿಲ್ಲ. ತೌಡನ್ನು ತೆಗೆದು ಕಾಳನ್ನು ಉಪಯೋಗಿಸುತ್ತಾರೆ. ಅಂತೆಯೇ ಸುಖವನ್ನೂ, ಪ್ರಯೋಜನವನ್ನೂ ಕೊಡತಕ್ಕ ವಸ್ತುವಿನಿಂದ ದುಃಖವೂ ಕಷ್ಟವೂ ಆಗುವುದೆಂದು ಆ ವಸ್ತುವನ್ನೇ ಬಿಟ್ಟುಬಿಡುವುದು ಜಾಣತನವಲ್ಲ

ಉದಾ— ಪಂಚದಶಿಯಲ್ಲಿ ಈ ಶ್ಲೋಕವಿದೆ—

ಗ್ರಂಥಮಭ್ಯಸ್ಯ ಮೇಧಾವೀ ಜ್ಞಾನವಿಜ್ಞಾನ ತತ್ತ್ವತಃ ।
ಪಲಾಲಮಿವ ಧಾನ್ಯಾರ್ಥೀ ತ್ಯಜೇದ್ ಗ್ರಂಥಮಶೇಷತಃ ॥

ಅರ್ಥ — ಶಾಸ್ತ್ರಗ್ರಂಥಗಳನ್ನು ಅಭ್ಯಸಿಸಿ ಬುದ್ಧಿವಂತನೂ, ಜ್ಞಾನಿಯೂ ಆದ ಮೇಲೆ, ಆ ಗ್ರಂಥಗಳನ್ನೆಲ್ಲ ಸಂಪೂರ್ಣವಾಗಿ ಬಿಟ್ಟುಬಿಡಬೇಕು.— ಕಾಳನ್ನು ಹೊಂದಿದವನು ತೌಡನ್ನು ಚೆಲ್ಲಿಕೊಡುವಂತೆ.

## ೬೫. ನ ಖಲು ಕುಟಜಬೀಜಾದ್ ವಟಾಂಕುರೋ ಜಾಯತೇ

ಕೊಡಸಿಗೆಯ ಬೀಜದಿಂದ ಆಲದ ಮರವು ಹುಟ್ಟಲಾರದು. ಕಾರಣಕ್ಕೆ ಅನುಗುಣವಾಗಿ ಕಾರ್ಯವು ಹುಟ್ಟುತ್ತದೆ. ಒಳ್ಳೆಯ ಕಾರ್ಯ ಮಾಡಿದರೆ ಒಳ್ಳೆಯ ಫಲ; ಕೆಟ್ಟ ಕೆಲಸ ಮಾಡಿದರೆ ಕೆಟ್ಟ ಫಲ ಎಂಬುದು ಈ ನ್ಯಾಯದ ಅರ್ಥ.

ಉದಾ— ಮನುಸ್ಮೃತಿಯಲ್ಲಿ ಈ ಶ್ಲೋಕವಿದೆ:—

ಅನ್ಯದುಪ್ತಂ ಜಾತಮನ್ಯದಿತ್ಯೇತನ್ನೋಪಪದ್ಯತೇ।
ಉಪ್ಯತೇ ಯದ್ಧಿ ಯದ್ಬೀಜಂ ತತ್ತದೇವ ಪ್ರರೋಹತಿ ||೧೦.೪೦||

ಅರ್ಥ— ಒಂದನ್ನು ಬಿತ್ತಿದರೆ ಮತ್ತೊಂದು ಹುಟ್ಟಿತು ಎಂಬುದು ಸರಿಯಲ್ಲ. ಯಾವ ಗಿಡದ ಬೀಜವನ್ನು ಬಿತ್ತಲಾಗುವುದೋ ಅದೇ ಗಿಡವು ಹುಟ್ಟುತ್ತದೆ. ಇದರ ಹೋಲಿಕೆ— **As shall you sow, so shall you reap**'— ಎಂಬ ಇಂಗ್ಲೀಷ್ ಗಾದೆ. ಹಾಗೂ "ಬಿತ್ತಿದ್ದನ್ನು ಬೆಳೆದುಕೊ'—ಎಂಬ ಕನ್ನಡ ಗಾದೆ.



## ೬೬. ನಹಿ ಕರಕಂಕಣದರ್ಶನಾಯಾದರ್ಶಾಪೇಕ್ಷಾ
## (ಅಂಗೈ ಹುಣ್ಣಿಗೆ ಕನ್ನಡಿಯೇಕೆ?)

ಕೈಯಲ್ಲಿರುವ ಬಳೆಯನ್ನು ನೋಡಲು ಕನ್ನಡಿ ಬೇಕಾಗಿಲ್ಲ. ನಿಸ್ಸಂದೇಹವಾಗಿ, ಸ್ಪಷ್ಟವಾಗಿ ತೋರುವ ವಸ್ತುವನ್ನು ಪರೀಕ್ಷಿಸಲು ಬೇರೇನೂ ಬೇಕಾಗಿಲ್ಲ.

'ಕರ್ಪೂರಮಂಜರಿ'ಯೆಂಬ ಪ್ರಾಕೃತ ಭಾಷೆಯ ನಾಟಕದಲ್ಲಿ 'ಹಸ್ತ-ಕಂಕಣಂ ಕಿಂ ದರ್ಪಣೇನ ದೃಶ್ಯತೇ ?'— 'ಕೈಯಲ್ಲಿರುವ ಬಳೆಯನ್ನು ಕನ್ನಡಿಯಿಂದ ನೋಡುವರೋ?' ಎಂಬ ವಾಕ್ಯವಿದೆ. ಸ್ಪಷ್ಟವಾಗಿ ಕಾಣುವ ನಿಸ್ಸಂದೇಹವಾಗಿ ತಿಳಿದುಬರುವ ವಸ್ತುವಿನ ವರ್ಣನೆ ಮಾಡುವಾಗ ಈ ಈ ನ್ಯಾಯದ ಬಳಕೆಯಿದೆ.



## ೬೭. ನಹಿ ಕಾಕಿನ್ಯಾಂ ನಷ್ಟಾಯಾಂ ತದನ್ವೇಷಣಂ ಕಾರ್ಷಾಪಣೇನ ಕ್ರಿಯತೇ

ಕಾಕಿನಿಯೆಂದರೆ ಕವಡೆ— ಅತ್ಯಂತ ಕಡಿಮೆ ಬೆಲೆಯ ನಾಣ್ಯ. ಕಾರ್ಷಾಪಣವೆಂದರೆ ಒಂದು ಚಿನ್ನದ ನಾಣ್ಯ. ಕಾಕಿನಿ— ಅಂದರೆ ಕವಡೆ

ಕಳೆದು ಹೋದಾಗ, ಅದನ್ನು ಶೋಧಿಸಲು ಕಾರ್ಷಾಪಣವನ್ನು ವೆಚ್ಚ ಮಾಡುವುದು ಮೂರ್ಖತನವೆನಿಸುವುದು! ಅಲ್ಪ ಲಾಭಕ್ಕಾಗಿ ಹೆಚ್ಚು ಶ್ರಮ ವ್ಯರ್ಥವೆಂದು ಈ ನ್ಯಾಯದ ತಾತ್ಪರ್ಯ. **(cf: Penny wise and pound foolish)**



## ೨೮. ನಹಿ ಭಿಕ್ಷುಕೋ ಭಿಕ್ಷುಕಾಂತರಂ ಯಾಚಿತುಮರ್ಹತಿ ಸತ್ಯನ್ಯಸ್ಮಿನ್ನಭಿಕ್ಷುಕೇ

ಧನಿಕರು—ಶ್ರೀಮಂತರು ಇರುವಾಗ ಒಬ್ಬ ಭಿಕ್ಷುಕನು ಇನ್ನೊಬ್ಬ ಭಿಕ್ಷುಕನನ್ನು ಯಾಚಿಸಬಾರದು. ಒಬ್ಬ ಭಿಕ್ಷುಕನು ಮತ್ತೊಬ್ಬನನ್ನು ಯಾಚಿಸಿದರೆ ಅವನನ್ನು ತೊಂದರೆಗೀಡುಮಾಡಿದಂತಾಗುವುದು. 'ಸಾಯುವವನ ಮೇಲೆ ನೋಯುವವನು ಬಿದ್ದನಂತೆ'—ಎಂಬ ಗಾದೆಯು ಇದಕ್ಕೆ ಹೋಲಿಕೆಯಾಗುವುದು.

ತಾತ್ಪರ್ಯವೆಂದರೆ— ಆಶ್ರಿತ ವಸ್ತುವು ಪ್ರಧಾನ ವಸ್ತುವಿನಿಂದಲೇ ನೇರವಾಗಿ ಸಂಬಂಧವನ್ನು ಪಡೆಯಬೇಕೇ ಹೊರತು ಮತ್ತೊಂದು ಆಶ್ರಿತ ವಸ್ತುವಿನೊಡನೆ ಪಡೆಯಬಾರದು.

ಯಾರೂ ಧನಿಕರು ದೊರೆಯದಿದ್ದಾಗ ಮಾತ್ರ ಭಿಕ್ಷುಕನು ಇನ್ನೊಬ್ಬ ಭಿಕ್ಷುಕನನ್ನು ಯಾಚಿಸಬಹುದು.



## ೬೯. ನಹಿ ಸರ್ವಃ ಸರ್ವಂ ಜಾನಾತಿ

ಎಲ್ಲರಿಗೆ (ಯಾರಿಗೂ) ಎಲ್ಲ ವಿಷಯಗಳು ಗೊತ್ತಿರಲಾರವು. ವಿದ್ಯೆಯು ಅಪಾರವಾಗಿದೆ. ಒಬ್ಬನು ಒಂದು ಶಾಸ್ತ್ರದಲ್ಲಿ ಅಥವಾ ಕಲೆಯಲ್ಲಿ ಪಂಡಿತನಿರಬಹುದು; ಇನ್ನೊಬ್ಬನು ಇನ್ನೂ ಒಂದೆರಡು ಶಾಸ್ತ್ರಗಳಲ್ಲಿ, ಕಲೆಗಳಲ್ಲಿ ಪಾರಂಗತನಿರಬಹುದು. ಆದರೆ ಆ ಇಬ್ಬರಿಗೂ ಉಳಿದ ಎಲ್ಲ ಶಾಸ್ತ್ರ-ಕಲೆಗಳಲ್ಲಿ ಜ್ಞಾನವಿರಬೇಕೆಂದು ನಂಬುವುದು ತಪ್ಪು. ಅಸಾಧ್ಯ. ಒಬ್ಬನು ಸರ್ವಜ್ಞನೆನಿಸಿಕೊಂಡರೂ, ಅವನು ಜಗತ್ತಿನ ಸಕಲ ವಿಷಯಗಳನ್ನು ಅರಿತಿರಲು ಸಾಧ್ಯವಿಲ್ಲ.

ಇದಕ್ಕೆ ಉದಾಹರಣೆಯೆಂದರೆ: —

ಒಬ್ಬ ತರ್ಕಶಾಸ್ತ್ರದ ವಿದ್ವಾಂಸನು ಎಣ್ಣೆಯನ್ನು ತರಲು ಗಾಣಿಗನ ಮನೆಗೆ ಹೋದ. ಆಗ ಗಾಣಿಗನು ಗಾಣಕ್ಕೆ ಕೋಣವನ್ನು ಕಟ್ಟಿ, ಗಾಣವನ್ನು ಆಡಿಸುತ್ತಿದ್ದ—ಅವನು ಕೋಣದ ಕೊರಳಿಗೆ ಒಂದು ಗಂಟೆಯನ್ನು ಕಟ್ಟಿದ್ದನು. ಆಗ ವಿದ್ವಾಂಸನು ಕುತೂಹಲದಿಂದ ಆ ಗಾಣಿಗನನ್ನುದ್ದೇಶಿಸಿ— 'ಏನಯ್ಯಾ ಕೋಣನ ಕೊರಳಲ್ಲಿ ಗಂಟೆಯೇಕೆ?' ಎಂದು ಕೇಳಿದನು. ಆಗ ಗಾಣಿಗನು— 'ಸ್ವಾಮೀ, ಗಾಣವನ್ನು ಕಟ್ಟಿ ಬೇರೆ ಕೆಲಸಕ್ಕಾಗಿ ಮನೆಯೊಳಗೆ ಹೋಗಬೇಕಾಗುತ್ತದೆ. ಗಂಟೆಯ ಸಪ್ಪಳ ನಿಂತರೆ, ಹೊರಗೆ ಬಂದು ಕೋಣಕ್ಕೆ ಒಂದು ಪೆಟ್ಟನ್ನು ಹಾಕಿ, ಕೆಲಸವನ್ನು ಮುಂದುವರಿಸುತ್ತೇನೆ.'—ಎಂದನು. ಆ ಉತ್ತರದಿಂದ ಸಮಾಧಾನವಾಗದೆ ಆ ಪಂಡಿತನು— 'ಅದು ಸರಿ, ಆದರೆ ಕೋಣವು ಸುಮ್ಮನೆ ನಿಂತುಕೊಂಡು ಗೋಣನ್ನು ಅಲ್ಲಾಡಿಸಿದರೆ?'—ಎಂದು ಪ್ರಶ್ನಿಸಿದನು. ಅದಕ್ಕೆ ಗಾಣಿಗನು 'ಪಂಡಿತರೇ, ಕೋಣವು ನಿಮ್ಮಂತೆ ತರ್ಕಶಾಸ್ತ್ರವನ್ನು ಓದಿಲ್ಲ!' ಎಂದು ನಗುತ್ತ ಉತ್ತರಿಸಿದನು.

ಆದ್ದರಿಂದ 'ನಹಿ ಸರ್ವಃ ಸರ್ವಂ ಜಾನಾತಿ'—ಎಂಬುದು ಯಾವಾಗಲೂ ಎಲ್ಲರಿಗೂ ಅನ್ವಯಿಸುವ ನ್ಯಾಯ.



## ೭೦. ನಹಿ ಸಹಸ್ರೇಣಾಪ್ಯಂಧೈಃ ಪಾಟಚ್ಚರೇಭ್ಯೋ ಗೃಹಂ ರಕ್ಷತೇ

ಪಾಟಚ್ಚರ—ಅಂದರೆ ಕಳ್ಳ. ನೂರು ಜನ ಕುರುಡರು ಸೇರಿದರೂ ಕಳ್ಳರಿಂದ ಮನೆಯನ್ನು ರಕ್ಷಿಸಲಾರರು—ಎಂದು ಈ ನ್ಯಾಯದ ಅರ್ಥ. ಸಂಖ್ಯಾಬಲಕ್ಕೆ ಮಹತ್ವವಿಲ್ಲ. ತಕ್ಕ ಸಾಮರ್ಥ್ಯಕ್ಕೆ ಮಾತ್ರ ಮಹತ್ವ-ವೆಂಬುದನ್ನು ಈ ನ್ಯಾಯವು ಹೇಳುತ್ತದೆ.

ಉದಾ— ಯುದ್ಧಕಲೆಯಲ್ಲಿ ಸುಶಿಕ್ಷಿತವಾದ ಒಂದು ಚಿಕ್ಕ ಸೈನ್ಯವು ಅಪೂರ್ಣ ಶಿಕ್ಷಣ ಪಡೆದ ಒಂದು ದೊಡ್ಡ ಸೈನ್ಯವನ್ನು ಸೋಲಿಸಬಹುದು. ನಮ್ಮ ಭಾರತದ ಇತಿಹಾಸದಲ್ಲಿ ಇಂಥ ಎಷ್ಟೋ ಉದಾಹರಣೆಗಳಿವೆ.

ಇದರಂತೆ, ಒಬ್ಬ ಮುಂಘೋರಣೆಯುಳ್ಳ ಪುರುಷನು ಮಾಡುವ ಮಹಾ ಕಾರ್ಯವನ್ನು ನೂರು ಜನ ಮೂರ್ಖರು ಮಾಡಬಹುದೆ?



## ೭೧. ನಹಿ ಸುತೀಕ್ಷ್ಣಾಪ್ಯಸಿಧಾರಾ ಸ್ವಾಂ ಛೇತ್ತುಂ ಪ್ರಭವತಿ

ಖಡ್ಗದ ಅಲಗು ಎಷ್ಟೇ ಹರಿತವಾಗಿರಲಿ, ಅದು ತನ್ನನ್ನೇ ಕತ್ತರಿಸಿ-ಕೊಳ್ಳಲಾರದು. ಅದು ಇತರ ವಸ್ತುಗಳ ವಿಷಯದಲ್ಲಿ ಮಾತ್ರ ಫಲ-ಕಾರಿಯಾಗಬಲ್ಲದು; ತನ್ನ ವಿಷಯದಲ್ಲಿ ಆಗಲಾರದು. ಇದು ವಸ್ತು-ಧರ್ಮವು. ಇದರಂತೆ, ಕಣ್ಣು ಬೇರೆ ವಸ್ತುಗಳನ್ನು ನೋಡಬಲ್ಲದು; ತನ್ನನ್ನು ತಾನು ನೋಡಲಾರದು. ಬೆಂಕಿಯು ಇತರ ವಸ್ತುಗಳನ್ನು ಸುಟ್ಟು ಭಸ್ಮಮಾಡಬಲ್ಲದು; ಆದರೆ ತನ್ನನ್ನು ತಾನೇ ಸುಟ್ಟುಕೊಳ್ಳಲಾರದು.

ಎಂಥ ಬಲಶಾಲಿಯಾದರೂ ಬುದ್ಧಿಶಾಲಿಯಾದರೂ ಅವನಿಗೆ ಇತರರ ಸಹಾಯ ಬೇಕೇಬೇಕು—ಎಂಬ ಸಂದರ್ಭದಲ್ಲಿ ಈ ನ್ಯಾಯದ ಉಪಯೋಗವಾಗುತ್ತದೆ. 'ನ ಹಿ ಸುಶಿಕ್ಷಿತೋಽಪಿ ನಟವಟುಃ ಸ್ವಸ್ಕಂಧಮಾರುಹ್ಯ ನೃತ್ಯತಿ'—ಎನ್ನುವಂತೆ ನಾಟ್ಯಕಲೆಯಲ್ಲಿ ನಿಪುಣನಾಗಿದ್ದರೂ ನಟನು ತನ್ನ ಹೆಗಲನ್ನೇ ಏರಿ ಕುಣಿಯಲಾರನು.—ಎಂಬುದು ಅಭಿಪ್ರಾಯ.



## ೭೨. ನ ಹಿ ಸ್ವತೋಽಸತೀ ಶಕ್ತಿಃ ಕರ್ತುಮನ್ಯೇನ ಶಕ್ಯತೇ

ಸ್ವತಃ ತನ್ನಲ್ಲಿ ಇಲ್ಲದ ಸಾಮರ್ಥ್ಯವನ್ನು (ಗುಣವನ್ನು) ಇತರರು ಉಂಟುಮಾಡಲಾರರು. ಹಾಲಿನಲ್ಲಿ ಮೊಸರಾಗುವ ಗುಣ—ಸಾಮರ್ಥ್ಯವಿದೆ.

ಇದು ಸ್ವತಃಸಿದ್ಧವಾದ ಸಂಗತಿ. ಹುಳಿಮಜ್ಜಿಗೆ ಅಥವಾ ಮೊಸರು ಆದಕ್ಕೆ (ಹಾಲು ಮೊಸರಾಗಲು) ಸಾಮಗ್ರಿ ಮಾತ್ರ. ಹಾಲಿನಲ್ಲಿ ಮೊಸರಾಗುವ ಗುಣವೇ (ಶಕ್ತಿ) ಇಲ್ಲದಿದ್ದರೆ, ಒತ್ತಾಯದಿಂದ ಅದನ್ನು ಮೊಸರಾಗಿ ಪರಿವರ್ತಿಸಲು ಸಾಧ್ಯವೇ ಇಲ್ಲ. ಬೇರೆ ಯಾವುದೇ ದ್ರವ ಪದಾರ್ಥವನ್ನು ಮೊಸರು ಮಾಡಲು ಯಾರಿಂದಲೂ ಸಾಧ್ಯವಿಲ್ಲ.

ಈ ತತ್ತ್ವವನ್ನಾಧರಿಸಿ ವಿಚಾರ ಮಾಡಿದರೆ, ವಿಜ್ಞಾನದ ಯಾವ ಆವಿಷ್ಕರಣವೂ ನೂತನ ನಿರ್ಮಾಣವೆನಿಸಿಕೊಳ್ಳಲು ಸಾಧ್ಯವಿಲ್ಲ. ಯಾವ ವಸ್ತುವಿನಲ್ಲಿ ಯಾವ ಶಕ್ತಿಯಿದೆ ಮತ್ತು ಯಾವ ಯಾವ ವಸ್ತುಗಳ ಸಂಯೋಜನದಿಂದ ಯಾವ ಶಕ್ತಿ ಹೊರಗೆ ಕಾಣಿಸಿಕೊಳ್ಳುವುದು ಎಂಬುದನ್ನು ಕಂಡುಹಿಡಿಯುವುದೇ (**discovery**) ವಿಜ್ಞಾನಿಗಳ ಕಾರ್ಯವೆಂದು ಹೇಳಬಹುದು.

ನ್ಯಾಯಮಂಜರಿ, ಶ್ಲೋಕವಾರ್ತಿಕ ಮುಂತಾದ ಗ್ರಂಥಗಳಲ್ಲಿ ಈ ನ್ಯಾಯವು ಉಪಯೋಗಿಸಲ್ಪಟ್ಟಿದೆ.



## ೭೩. ನಟಸಾಮಾಜಿಕ ನ್ಯಾಯ

ನಟನು ರಂಗಮಂಟಪದಲ್ಲಿ ಭೀಮನಂತೆಯೂ, ರಾಮನಂತೆಯೂ, ರಾವಣನಂತೆಯೂ ಅಭಿನಯಿಸುತ್ತಾನೆ. ಭೀಮನ ಕ್ರೋಧವನ್ನೂ, ರಾಮನ ದುಃಖವನ್ನೂ, ರಾವಣನ ಕ್ರೌರ್ಯವನ್ನೂ ತನ್ನದೇ ಎಂಬ ಹಾಗೆ ತೋರಿಸಿ ಸಾಮಾಜಿಕರಿಗೆ ರಸದೂಟವನ್ನು ಮಾಡಿಸುತ್ತಾನೆ. ನಾನಾ-

ಜಕನು (ಪ್ರೇಕ್ಷಕನು) ರಾಮ, ಭೀಮ, ರಾವಣರೊಂದಿಗೆ ತಾದಾತ್ಮ್ಯ ಭಾವವನ್ನು ಹೊಂದಿ ಆ ರಸವನ್ನು ಆಸ್ವಾದಿಸುತ್ತಾನೆ.

ಹಾಗೆಯೇ, ಸಂಸಾರದಲ್ಲಿಯೂ ಪತ್ನಿ -- ಪುತ್ರರಲ್ಲಿಟ್ಟುಕೊಳ್ಳುವ ತಾದಾತ್ಮ್ಯ ಭಾವನೆಯೇ ಮನುಷ್ಯನ ಸುಖ-ದುಃಖಗಳಿಗೆ ಕಾರಣ



## ೭೪. ನೃಪ ನಾಪಿತಪುತ್ರ ನ್ಯಾಯ

ಒಬ್ಬ ರಾಜನಿಗೆ ಅವನ ಒಬ್ಬ ಮಂತ್ರಿಯು— "ಸಕಲರೂ ತಮ್ಮ ವಸ್ತುವೇ ಉತ್ತಮೋತ್ತಮವಾದದ್ದೆಂದು ತಿಳಿಯುತ್ತಾರೆ. ಅವರ ದೃಷ್ಟಿಯಲ್ಲಿ ಇತರರು ಉತ್ತಮವಾಗಿದ್ದರೂ ಸಾಮಾನ್ಯವೆಂಬ ಭಾವನೆಯೇ ಇರುತ್ತದೆ." ಎಂದು ಹೇಳಿದನು. ಆದರೆ ರಾಜನು ಆ ಮಾತಿಗೆ ಒಪ್ಪಿಕೊಳ್ಳಲಿಲ್ಲ. ತರುವಾಯ ಮಂತ್ರಿಯ ಹೇಳಿಕೆಯಂತೆ ರಾಜನು, ಅರಮನೆಯ ನಾಪಿತನನ್ನು (ಕ್ಷೌರಿಕ) ಕರೆದು, "ಅತ್ಯಂತ ಸುಂದರವಾದ ಒಂದು ಮಗುವನ್ನು ತಂದು ತೋರಿಸು. ನಿನಗೆ ಯೋಗ್ಯ ಬಹುಮಾನ ಕೊಡುತ್ತೇನೆ." ಎಂದು ಆಜ್ಞಾಪಿಸಿದನು.

ನಾಪಿತನು ಅನೇಕ ದಿವಸಗಳ ವರೆಗೆ ಹುಡುಕಿದರೂ ಅವನಿಗೆ ಸುಂದರನಾಗಿ ಕಾಣುವ ಮಗು ಸಿಗಲಿಲ್ಲ. ಕೊನೆಗೆ, ತನ್ನ ಮಗುವೇ ಅತ್ಯಂತ ಸುಂದರವೆಂದು ನಿಶ್ಚಯಿಸಿ, ಅದನ್ನು ರಾಜನಲ್ಲಿಗೆ ಕರೆತಂದು ತೋರಿಸಿದನು ಆದರೆ, ಅದು ಅತ್ಯಂತ ಕುರೂಪಿಯಾದ ಮಗು. ಆಗ ರಾಜನು ಮಂತ್ರಿಯ ವ್ಯವಹಾರಜ್ಞಾನವನ್ನು ಮೆಚ್ಚಿಕೊಂಡನಂತೆ.

'ಸರ್ವಃ ಕಾಂತಮಾತ್ಮೀಯಂ ಪಶ್ಯತಿ'—ಎಂಬ ಶಾಕುಂತಲ ನಾಟಕದ ವಾಕ್ಯವು ಈ ನ್ಯಾಯದ ವರ್ಣನೆಯನ್ನು ಮಾಡುತ್ತದೆ.



## ೭೫. ನಾಸಿಕಾಗ್ರೇಣ ಕರ್ಣಮೂಲಕರ್ಷಣ ನ್ಯಾಯ

ಮೂಗಿನ ತುದಿಯಿಂದ ಕಿವಿಯ ತಳವನ್ನು ತಳ್ಳಬೇಕು! ಮೂಗನ್ನು ಎಷ್ಟು ಚಾಚಿದರೂ ಅದು ಕಿವಿಯನ್ನು ತಲುಪುವುದಿಲ್ಲ. ಅಂದರೆ, ಮೂಗನ್ನು ಚಾಚುವುದೇ ಸಾಧ್ಯವಿಲ್ಲ ಆದ್ದರಿಂದ. ಅಸಾಧ್ಯವಾದ ಕಾರ್ಯವನ್ನು ಮಾಡಲುದ್ಯುಕ್ತನಾದಾಗ ಈ ನ್ಯಾಯವನ್ನು ಉದಾಹರಣೆಗಾಗಿ ಬಳಸುತ್ತಾರೆ. ಕಾರ್ಯಸಾಧನೆಗೆ ಶಕ್ತಿಶಾಲಿಯಾದ ಸಾಧನ ಬೇಕು. ಸಾಧನವು ತೀರ ಅಸಮರ್ಥನಾಗಿದ್ದಾಗ ಈ ನ್ಯಾಯದ ಉಪಯೋಗ.



## ೭೬. ನಿರಾಮಯಸ್ಯ ಕಿಮಾಯುರ್ವೇದವಿದಾ

ಆರೋಗ್ಯವಂತನಿಗೆ ವೈದ್ಯನೇಕೆ ಬೇಕು? ರೋಗಿಗೆ ಮಾತ್ರ ವೈದ್ಯನಿಂದ ಪ್ರಯೋಜನ.

ಹಸಿದವರಿಗೆ ಆಹಾರ ಕೊಟ್ಟರೆ, ಅವರು ಉಂಡು ತೃಪ್ತಿಪಡುವರು; ಹೊಟ್ಟೆತುಂಬಿದವರಿಗೆ ಆಹಾರ ಕೊಟ್ಟರೆ ಏನು ಉಪಯೋಗ? ಅವರು ಅದನ್ನು ಚೆಲ್ಲಿಬಿಡುವರು. ಇಂಥ ಸಂದರ್ಭದಲ್ಲಿ ಈ ನ್ಯಾಯದ ಉಪ-ಯೋಗ.



## ೭೭. ಪಂಕಪ್ರಕ್ಷಾಲನ ನ್ಯಾಯ

'ಪಂಕ' ಎಂದರೆ ಕೆಸರು; 'ಪ್ರಕ್ಷಾಲನ' ವೆಂದರೆ ತೊಳೆದುಕೊಳ್ಳುವುದು. ವ್ಯರ್ಥವಾಗಿ ಕೆಸರನ್ನು ಮುಟ್ಟಿ, ಅದನ್ನು ತೊಳೆದುಕೊಳ್ಳುವುದರಿಂದೇನು ಪ್ರಯೋಜನ? ಕೆಸರನ್ನು ಮುಟ್ಟದಿರುವುದೇ ಉತ್ತಮವಲ್ಲವೇ?

ಪಂಚತಂತ್ರದಲ್ಲಿ ಒಂದು ಶ್ಲೋಕವಿದೆ—

'ಧರ್ಮಾರ್ಥಂ ಯಸ್ಯ ವಿತ್ತೇಹಾ ವರಂ ತಸ್ಯ ನಿರೀಹತಾ |
ಪ್ರಕ್ಷಾಲನಾದ್ಧಿ ಪಂಕಸ್ಯ ದೂರಾದಸ್ಪರ್ಶನಂ ವರಂ ||

ಅರ್ಥ— ಧರ್ಮಕಾರ್ಯಕ್ಕಾಗಿ ಯಾವನು ಹಣವನ್ನು ಬಯಸು-ತ್ತಾನೋ, ಅವನು ಹಣವನ್ನು ಬಯಸದಿರುವುದೇ ಒಳ್ಳೇದು. ಕೆಸರನ್ನು ಮುಟ್ಟಿ, ಆಮೇಲೆ ತೊಳೆದುಕೊಳ್ಳುವುದಕ್ಕಿಂತ, ಅದನ್ನು ಮುಟ್ಟದಿರುವುದೇ ಉತ್ತಮ.

ದೇವಾಲಯ ಕಟ್ಟಿಸುತ್ತೇನೆಂದೂ, ಅನ್ನಸಂತರ್ಪಣೆ ಮಾಡುತ್ತೇನೆಂದೂ, ಕಾಶೀಯಾತ್ರೆಗೆ ಹೋಗುತ್ತೇನೆಂದೂ ಹೇಳಿ, ಧನ ಬೇಡುವವರಿಗೆ ಈ ನ್ಯಾಯ ಅನ್ವಯವಾಗುತ್ತದೆ.



## ೭೮. ಪಂಗ್ವಂಧ ನ್ಯಾಯ

ಪಂಗು ಅಂದರೆ ಕುಂಟ—ಹೆಳವ. ಅಂಧನೆಂದರೆ ಕುರುಡ. 'ಕುರುಡ ಕುಂಟರಿಬ್ಬರೂ ಎಲ್ಲಿಗೋ ಪ್ರಯಾಣ ಮಾಡಬೇಕಾಗಿತ್ತು. ಕುಂಟನು ಕುರುಡನ ಹೆಗಲ ಮೇಲೆ ಕುಳಿತು, ದಾರಿಯಲ್ಲಿರುವ ಹಳ್ಳ-ಕೊಳ್ಳಗಳ ಬಗೆಗೆ ಎಚ್ಚರಿಕೆ ಕೊಟ್ಟು ಪ್ರಯಾಣವನ್ನು ಮುಗಿಸಿದನು. ಇಬ್ಬರೂ ತಾವು ಹೋಗಬೇಕಾದ ಊರಿಗೆ ಹೋಗಿ ಸೇರಿದರು'—ಎಂದು ಒಂದು ಕಥೆ ಇದೆ. ಆ ಕಥೆಯ ಪ್ರಕಾರ ಕುರುಡನಾಗಲಿ, ಕುಂಟನಾಗಲಿ, ಸ್ವತಂತ್ರ-ವಾಗಿ ಪ್ರಯಾಣ ಮಾಡುವುದು ಸಾಧ್ಯವಿದ್ದಿಲ್ಲ. ಇಬ್ಬರೂ ಊನಾಂಗರೇ. ಆದರೆ, ಪರಸ್ಪರ ಸಹಾಯದಿಂದ ಅಸಾಧ್ಯ ಕೆಲಸವನ್ನು ಸಾಧಿಸಿದರು.

ಪರಸ್ಪರ ಸಹಾಯದಿಂದ ಉಭಯತರೂ ಪ್ರಯೋಜನವನ್ನು ಪಡೆಯುವ ರೆಂಬುದು ಈ ನ್ಯಾಯದ ತಾತ್ಪರ್ಯ.



## ೭೯. ಪರ್ಜನ್ಯವಲ್ಲಕ್ಷಣ ಪ್ರವೃತ್ತಿಃ

ಪರ್ಜನ್ಯವೆಂದರೆ ಮಳೆ. ಪರ್ಜನ್ಯದಂತೆ ಲಕ್ಷಣಗಳ ಪ್ರವೃತ್ತಿಯು ಆಗುತ್ತದೆ. ಶಾಸ್ತ್ರದಲ್ಲಿ ವಿಧಿ, ನಿಯಮ, ನಿಷೇಧಗಳಿಗೆ ಲಕ್ಷಣವೆನ್ನಲಾಗಿದೆ. ಮೇಘವು (ಮಳೆ) ಹೊಲ, ಗದ್ದೆ, ಪರ್ವತ, ಸಮುದ್ರಗಳ ಮೇಲೆ

ಯಾವ ಭೇದವೂ ಇಲ್ಲದೆ ಮಳೆಯನ್ನು ಸುರಿಸುತ್ತದೆ. ಇಂಥಲ್ಲಿ ಮಳೆ ಬೇಕು, ಇಂಥಲ್ಲಿ ಮಳೆ ಬೇಡ ಎಂಬ ವಿವೇಚನೆ ಮೇಘಕ್ಕೆ ಇಲ್ಲ. ಹಾಗೆ ಲಕ್ಷಣವು ಎಲ್ಲ ಲಕ್ಷ್ಯಗಳಲ್ಲಿಯೂ ಪ್ರವರ್ತಿಸುತ್ತದೆ. ಕೆಲವು ಕಡೆಗೆ ಫಲವಿರುತ್ತದೆ. ಇನ್ನು ಕೆಲವು ಕಡೆಗೆ ಸ್ಪಷ್ಟವಾದ ಫಲವಿರುವುದಿಲ್ಲ. ಯಾಕೆಂದರೆ ಆ ಫಲವು ಬೇರೆ ಕಾರಣಗಳಿಂದ ಸಿದ್ಧವಾಗಿಯೇ ಇರುತ್ತದೆ. ವ್ಯಾಕರಣ ಶಾಸ್ತ್ರದಲ್ಲಿ ವಿಶೇಷವಾಗಿ ಈ ನ್ಯಾಯವು ಉಪಯುಕ್ತವಾಗುತ್ತದೆ.

ಇದರಂತೆ, ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು—'ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ' 'ನನಗೆ ಶತ್ರುವೂ ಇಲ್ಲ ಮಿತ್ರನೂ ಇಲ್ಲ'— ಎಂದು ಹೇಳಿದ್ದಾನೆ. ಇದೇ ಪ್ರಕಾರ, ಶ್ರೀಮಂತ, ಬಡವ—ಎಂಬ ಭೇದವಿಲ್ಲದೆ ಸೂರ್ಯದೇವನು ಎಲ್ಲರಿಗೂ ಬೆಳಕು ಕೊಡುತ್ತಾನೆ. ಕಾಯದೆ-ಕಾನೂನು ಗಳ ದೃಷ್ಟಿಯಲ್ಲಿ ಎಲ್ಲರೂ ಒಂದೇ.

ಹೀಗೆ ಪಕ್ಷಪಾತವಿಲ್ಲದೆ ಕಾರ್ಯ ನಡೆದ ಪ್ರಸಂಗದಲ್ಲಿಯೂ ಈ ನ್ಯಾಯದ ಬಳಕೆಯಾಗುವುದು.



## ೮೦. ಪಶ್ಯಸ್ಯದ್ರೌ ಜ್ವಲದಗ್ನಿಂ ನ ಪುನಃ ಪಾದಯೋರ್ಧಃ

ಗುಡ್ಡದಲ್ಲಿ ಉರಿಯುವ ಅಗ್ನಿಯನ್ನು ನೋಡುತ್ತಿದ್ದೀ. ಆದರೆ, ನಿನ್ನ ಪಾದದಡಿಯಲ್ಲಿರುವ ಬೆಂಕಿ ನಿನಗೆ ಕಾಣದು! ಸಾಕಷ್ಟು ಸುಶಿಕ್ಷಿತ ನಿದ್ದರೂ ಜಗತ್ತಿನಲ್ಲಿ ಹೇಗೆ ಬಾಳಬೇಕೆಂಬ ವ್ಯವಹಾರಜ್ಞಾನವಿಲ್ಲದ ಮನುಷ್ಯನಿಗೆ ಈ ನ್ಯಾಯವು ಅನ್ವಯಿಸುತ್ತದೆ.

ಅದರಂತೆ, ಇತರರಿಗೆ ನೀತಿಯನ್ನು ಬೋಧಿಸುವ ನೀನು ಸ್ವತಃ ನೀತಿಯನ್ನೇಕೆ ಆಚರಣೆಯಲ್ಲಿ ತಂದಿಲ್ಲ?—ಎಂಬ ಆಕ್ಷೇಪವೂ ಈ ನ್ಯಾಯದ ತಾತ್ಪರ್ಯವಾಗಬಲ್ಲದು.

'ಪರಚಿಂತೆ ನಿಮಗೆ ಏಕೆ ಅಯ್ಯಾ, ನಿಮ್ಮ ಚಿಂತೆ ನಿಮಗೆ ಸಾಲದೆ—' ಎಂಬ ಬಸವಣ್ಣನವರ ವಚನದ ಅರ್ಥವೂ ಇದಕ್ಕೆ ಹೋಲಿಕೆಯಾಗಬಹುದು.



## ೮೧. ಪಾಟಚ್ಚರಲುಂಠಿತೇ ವೇಶ್ಮನಿ ಯಾಮಿಕ ಜಾಗರಣಮಿತಿ ನ್ಯಾಯ

ಪಾಟಚ್ಚರ=ಕಳ್ಳ, ವೇಶ್ಮನಿ=ಮನೆ, ಲುಂಠಿತೇ=ಲೂಟಿಯಾದ ಮೇಲೆ, ಯಾಮಿಕ=ಕಾವಲುಗಾರರು, ಜಾಗರಣಮಿತಿ ನ್ಯಾಯ = ಎಚ್ಚರಗೊಂಡು ಕಾವಲು ಮಾಡಿದರು—ಎಂಬ ನ್ಯಾಯ. ಕಳ್ಳರು ಮನೆಯಲ್ಲಿ ಹೊಕ್ಕು, ಇದ್ದ ಸಂಪತ್ತನ್ನು ಅಪಹರಿಸಿಕೊಂಡು ಹೋದ ನಂತರ ಕಾವಲುಗಾರನಿಗೆ ಎಚ್ಚರವಾಯಿತಂತೆ!

ಪೆಟ್ಟು ಬಿದ್ದ ಮೇಲೆ (ತಲೆಗೆ ಬಡಿದ ಮೇಲೆ) ಬುದ್ಧಿ ಬಂದಿತು; ನೀರು ಹರಿದು ಬೆಳೆಗಳನ್ನು ಹಾಳು ಮಾಡಿದ ಮೇಲೆ ಅಣೇಕಟ್ಟನ್ನು ಮುಚ್ಚಿದರಂತೆ! ಈ ನ್ಯಾಯದ ಉಪಯೋಗ ಸ್ಪಷ್ಟವಾಗಿ ತಿಳಿಯುತ್ತದೆ.



## ೮೨. ಪಾಟನಮಂತರೇಣ ವಿಷವ್ರಣಾನಾಂ ನೋಪಶಾಂತಿಃ

ವಿಷಯುಕ್ತ ಹುಣ್ಣುಗಳು ಒಡೆದ ಹೊರತು ಮಾಯುವುದಿಲ್ಲ. ಬಾವು, ಕುರು, ಕಜ್ಜಿ, ಮುಂತಾದ ವ್ರಣಗಳಿಗೆ ಶಸ್ತ್ರಚಿಕಿತ್ಸೆ ಮಾಡಿ ಕೀವು ಮುಂತಾದ ಹೊಲಸನ್ನು ಹೊರತೆಗೆದರೇ (ನಂತರ ಔಷಧ ಹಚ್ಚಿದರೆ ಮಾತ್ರ) ಅವು ಮಾಯುವುವು.

ದುಷ್ಟರನ್ನು ಶಿಕ್ಷಿಸುವುದೇ ಸರಿಯಾದ ಮಾರ್ಗವೆಂದು ಈ ನ್ಯಾಯದ ತಾತ್ಪರ್ಯ. ದುಃಖವನ್ನು ಅನುಭವಿಸಿದರೆ ನಮ್ಮ ಪಾಪಕರ್ಮದ ನಾಶ-ವಾಗುತ್ತದೆಂದು ದಾರ್ಶನಿಕರು ಹೇಳುತ್ತಾರೆ. ದುಷ್ಟನೊಡನೆ ಅಹಿಂಸೆ ಸಲ್ಲದು. ಶಠನಿಗೆ ಶಾಠ್ಯವೇ ಉತ್ತರವೆಂದು ಅಭಿಪ್ರಾಯ.



## ೮೩. ಪಿಂಡಮುತ್ಸೃಜ್ಯ ಕರಂ ಲೇಢಿ

ತುತ್ತನ್ನು ಬಿಟ್ಟು ಕೈಯನ್ನು ನೆಕ್ಕುವುದು! ಶ್ರೇಷ್ಠವಾದುದು ಕೈ-ಯಲ್ಲಿದ್ದಾಗ ಅಲ್ಪ ವಸ್ತುವಿನ ಆಸೆ ಮಾಡುವುದು— ಹೀಗೆ ಮಾಡುವವ-ರನ್ನು ವರ್ಣಿಸುವಾಗ ಈ ನ್ಯಾಯದ ಬಳಕೆಯಾಗುತ್ತದೆ.

ಉದಾ—'ಹಸುವಿನ ಹಾಲು ಸಿಕ್ಕಾಗ, ಅದನ್ನು ಬಿಟ್ಟು ಅನ್ನದ ಗಂಜಿಯನ್ನು ಕುಡಿದಂತೆ.' 'ತನಗೆ ಬೇಕಾದ ವ್ಯಕ್ತಿಯೇ ಎದುರಿಗೆ ಬಂದಾಗ

ಅವನ ಚಿತ್ರವನ್ನು ನೋಡುತ್ತ ಕುಳಿತನಂತೆ.'— ಮಳೆಯ ನೀರನ್ನು ಬಿಟ್ಟು, ಮಂಜಿನ ನೀರಿಗೆ ಕೈಯೊಡ್ಡಿದಂತೆ— ಇತ್ಯಾದಿ ಮಾತುಗಳು ಈ ನ್ಯಾಯದ ಅರ್ಥವನ್ನು ಹೇಳುತ್ತವೆ.



## ೮೪. ಪಿಶಾಚಾನಾಂ ಪಿಶಾಚಭಾಷಯೈವೋತ್ತರಂ ದೇಯಂ

ಪಿಶಾಚಿಗಳಿಗೆ ಪೈಶಾಚಭಾಷೆಯಲ್ಲಿಯೇ ಉತ್ತರವನ್ನು ಕೊಡಬೇಕು! ಅವುಗಳಿಗೆ ಇತರ ಭಾಷೆಗಳು ತಿಳಿಯುವುದಿಲ್ಲ! 'ಶಠಂ ಪ್ರತಿ ಶಾಠ್ಯ' ಎಂಬಂತೆ ದುಷ್ಟರನ್ನು ಶಿಕ್ಷಿಸುವುದೇ ಯೋಗ್ಯ. ಅವರೊಡನೆ ಸೌಮ್ಯವಾಗಿ ವರ್ತಿಸಿದರೆ ವ್ಯರ್ಥ— ಎಂಬುದು ಈ ನ್ಯಾಯದ ತಾತ್ಪರ್ಯ.



## ೮೫. ಪಿಷ್ಟಪೇಷಣ ನ್ಯಾಯ

ಹಿಟ್ಟನ್ನು ಮತ್ತೆ ಹಿಟ್ಟು ಮಾಡುವುದು ವ್ಯರ್ಥವಾದುದು. ಹೇಳಿದ ಮಾತನ್ನೇ ಮತ್ತೆ ಹೇಳುವುದು—ಮುಂತಾದ ಸಂದರ್ಭಗಳಲ್ಲಿ ನಿರರ್ಥಕವಾದ

ಕಾರ್ಯವನ್ನು ಸೂಚಿಸುವುದಕ್ಕೆ ಈ ನ್ಯಾಯದ ಉಪಯೋಗವಾಗುತ್ತದೆ. 'ತುಷಕಂಡನ ನ್ಯಾಯ' ದಂತೆಯೇ ಇದರ ಅರ್ಥವೂ ಇದೆ.



## ೮೬. ಪೃಷ್ಟ ಲಗುಡ ನ್ಯಾಯ

ಪೃಷ್ಠಲಗುಡವೆಂದರೆ ದಪ್ಪನೆಯ ದೊಣ್ಣೆ. ಊರಿಗೆ ಹೊಸಬರು ಬಂದಾಗ ಊರ ನಾಯಿಗಳೆಲ್ಲ ಸೇರಿಕೊಂಡು ಬೆನ್ನುಹತ್ತುವವು. ಆಗ ಬಲವಾದ ದೊಣ್ಣೆಯನ್ನು ಒಂದು ನಾಯಿಯ ಮೇಲೆ ಬೀಸಿ ಒಗೆದರೆ, ಪೆಟ್ಟು ತಿಂದ ನಾಯಿಯೊಡನೆ ಎಲ್ಲ ನಾಯಿಗಳೂ ಓಡಿ ಹೋಗುವವು. ಒಂದು ಪ್ರಯತ್ನದಿಂದ ಅನೇಕ ಕಾರ್ಯಸಾಧನೆಯಾಗುವಾಗ ಈ ನ್ಯಾಯವನ್ನು ಬಳಸುವರು.



## ೮೭. ಪ್ರಯೋಜನಮನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ

ಮಂದ ಬುದ್ಧಿಯವನೂ ಸಹ ತನಗೆ ಉಪಯೋಗವಿಲ್ಲದ ಕಾರ್ಯ-ವನ್ನು ಮಾಡುವುದಿಲ್ಲ. ಅಂದಮೇಲೆ ಬುದ್ಧಿವಂತನು ವ್ಯರ್ಥವಾದ ಕಾರ್ಯ

ವನ್ನು ಮಾಡಬಹುದೇ? ಅದ್ದರಿಂದ ಯಾರೂ ತಮಗೆ ಪ್ರಯೋಜನವಿಲ್ಲದ ಕೆಲಸವನ್ನು ಮಾಡುವುದಿಲ್ಲವೆಂಬ ಅಭಿಪ್ರಾಯವು ಈ ನ್ಯಾಯದ್ದು.



## ೮೮. ಬಕಬಂಧನ ನ್ಯಾಯ

ಬಕವನ್ನು (ಕೊಕ್ಕರೆ) ಹಿಡಿಯುವ ನ್ಯಾಯ. ಬಕವನ್ನು ಹಿಡಿಯಲು ಏನು ಉಪಾಯವೆಂದು ಒಬ್ಬನು ಇನ್ನೊಬ್ಬನನ್ನು ಕೇಳಿದನಂತೆ. ಆ ಇನ್ನೊಬ್ಬನು— 'ಒಂದು ಬೆಣ್ಣೆಯ ದೊಡ್ಡ ಕರಣೆಯನ್ನು ತೆಗೆದುಕೊಂಡು ಹೋಗಿ ಕೊಕ್ಕರೆಯ ತಲೆಯ ಮೇಲೆ ಇಡಬೇಕು. ಬಿಸಿಲಿಗೆ ಆ ಬೆಣ್ಣೆ ಕರಗಿ ಕೊಕ್ಕರೆಯ ಕಣ್ಣಲ್ಲಿ ಹರಿದು, ಅದರ ಕಣ್ಣು ಕಾಣದಂತಾಗುತ್ತದೆ. ಆಗ ಅದನ್ನು ಹಿಡಿಯಬೇಕು!—ಎಂದು ಹೇಳಿದನಂತೆ. ಕೊಕ್ಕರೆಯನ್ನು ಹಿಡಿಯದೆ ಅದರ ತಲೆಯ ಮೇಲೆ ಬೆಣ್ಣೆಯನ್ನು ಇಡುವುದು ಹೇಗೆ? ಆದ್ದರಿಂದ ದಡ್ಡತನದ ಉಪಾಯವನ್ನು— ಬಳಸು ದಾರಿಯನ್ನು ಸೂಚಿಸಿದಾಗ ಈ ನ್ಯಾಯದ ಉಪಯೋಗವಾಗುತ್ತದೆ.

'ದಂಡಸರ್ಪಮಾರಣ ನ್ಯಾಯ'ವನ್ನು ಇದು ಹೋಲುತ್ತದೆ.



## ೮೯. ಬಧಿರಕರ್ಣಜಪ ನ್ಯಾಯ

ಕಿವುಡನಿಗೆ ಕಿವಿಮಾತು ಹೇಳುವ ನ್ಯಾಯ. ನಿರರ್ಥಕವಾದ ಪ್ರಯತ್ನವನ್ನು ಸೂಚಿಸುವಾಗ ಈ ನ್ಯಾಯ ಉಪಯೋಗಬೀಳುತ್ತದೆ. 'ಅರಣ್ಯರೋದನ' ನ್ಯಾಯದ ಅರ್ಥವೇ ಇದಕ್ಕೆ ಹೋಲಿಕೆ.



## ೯೦. ಬಹುರಾಜಕ ದೇಶ ನ್ಯಾಯ

ಒಂದು ದೇಶಕ್ಕೆ ಒಬ್ಬನೇ ರಾಜನಿರಬೇಕು. ಬಹು ಜನ ದೊರೆಗಳಾದರೆ, ಭಿನ್ನಾಭಿಪ್ರಾಯಗಳು ಹೆಚ್ಚಿ, ದೇಶದಲ್ಲಿ ಅನೈಕ್ಯವಾಗಿ ಅರಾಜಕತೆಯುಂಟಾಗುವುದು. ಪರಸ್ಪರ ವಿರೋಧೀ ಆಜ್ಞೆಗಳು ಹೊರಡುವುದರಿಂದ ದೇಶದಲ್ಲಿ ದಂಗೆಗಳೆದ್ದು, ಕ್ರಾಂತಿಗಳುಂಟಾಗಿ ದೇಶವು ಅಧಃಪತನಹೊಂದುತ್ತದೆ. ಆದ್ದರಿಂದ ದೇಶದಲ್ಲಿ ಒಕ್ಕಟ್ಟು, ಶಾಂತಿಗಳು ಇರಬೇಕಾದರೆ ಒಬ್ಬನೇ ಒಬ್ಬ ದೊರೆ ಇರಬೇಕು.

ಅದರಂತೆ ಮನೆಯಲ್ಲಿಯೂ ಒಬ್ಬನೇ ಹಿರಿಯನಿರಬೇಕು. ಇಲ್ಲವಾದರೆ ಆ ಮನೆಯು ಜಗಳದ ತವರುಮನೆಯಾದೀತು!



## ೯೧. ಭಕ್ಷಿತೇऽಪಿ ಲಶುನೇ ನ ಶಾಂತೋ ವ್ಯಾಧಿಃ

ಅರ್ಥ:— ಬೆಳ್ಳುಳ್ಳಿಯನ್ನು ತಿಂದರೂ ರೋಗವು ಗುಣವಾಗಲಿಲ್ಲ. ಬೆಳ್ಳುಳ್ಳಿಯಲ್ಲಿ ದುರ್ಗಂಧವಿರುವುದರಿಂದ ಶಾಸ್ತ್ರದಲ್ಲಿ, ಅದನ್ನು ತಿನ್ನಬಾರದೆಂದು ಹೇಳಲಾಗಿದೆ. ಆದರೆ, ಔಷಧದಂತೆ ಆದನ್ನು ಉಪಯೋಗಿಸಿದರೆ ದೋಷವಿಲ್ಲವೆಂದು ಒಬ್ಬ ರೋಗಿಗೆ ವೈದ್ಯರು ಹೇಳಿದರು. ಅದರಂತೆ ಅವನು ಬೆಳ್ಳುಳ್ಳಿ ತಿಂದನು. ಆದರೆ, ರೋಗ ಮಾತ್ರ ಗುಣವಾಗಲಿಲ್ಲ. ಬಾಯಿ ಮಾತ್ರ ಹೊಲಸು ನಾರಹತ್ತಿತು. ಮನಸ್ಸಿಲ್ಲದಿದ್ದರೂ ಲಾಭದಾಸೆಯಿಂದ ಒಂದು ಕಾರ್ಯವನ್ನು ಮಾಡಿದಾಗ, ಫಲ ದೊರಕದಿದ್ದರೆ ಈ ನ್ಯಾಯವನ್ನು ಉಪಯೋಗಿಸಲಾಗುತ್ತದೆ.



## ೯೨. ಭಸ್ಮನ್ಯಾಜ್ಯಾಹುತಿ ನ್ಯಾಯ

ಬೂದಿಯಲ್ಲಿ ತುಪ್ಪವನ್ನು ಆಹುತಿಕೊಟ್ಟ ಹಾಗೆ— ಅಂದರೆ ವ್ಯರ್ಥ ಖರ್ಚು ಮಾಡಿದ ಹಾಗೆ. ಅಗ್ನಿಯಲ್ಲಿ ಹೋಮ ಮಾಡಿದರೆ ತಕ್ಕ ಫಲ ಸಿಗುತ್ತದೆ. ಪಾತ್ರಾಪಾತ್ರವನ್ನರಿತು ಯಾವುದೇ ಕೆಲಸವನ್ನು ಮಾಡಬೇಕೆಂದು ಈ ನ್ಯಾಯದ ಅರ್ಥ. ಈ ನ್ಯಾಯದ ಹೋಲಿಕೆ–

ಯಂದರೆ— 'ಸೀರಿನಲ್ಲಿ ಹೋಮ ಮಾಡಿದ ಹಾಗೆ', 'ಹೊಳೆಯಲ್ಲಿ ಹುಣಿಸೆ ಹಣ್ಣು ತೊಳೆದ ಹಾಗೆ.'



## ೯೩. ಭಿಕ್ಷುಪಾದ ಪ್ರಸಾರಣ ನ್ಯಾಯ

ಒಬ್ಬ ಸಂನ್ಯಾಸಿಯು ಒಬ್ಬ ಶ್ರೀಮಂತನ ಮನೆಯಲ್ಲಿ ಸೇರಿಕೊಂಡು ಯಥೇಷ್ಟವಾಗಿ ಅನ್ನ-ವಸ್ತ್ರಾದಿಗಳನ್ನು ಗಿಟ್ಟಿಸುತ್ತ ಸುಖದಿಂದ ಬದುಕಲು ಆಶಿಸಿದನು. ಅವನು, ಮೊದಲನೆಯ ಬಾರಿ ಸಿರಿವಂತನ ಮನೆಯನ್ನು ಪ್ರವೇಶಿಸಿದಾಗ ಧನಿಕನು ಮಾಡಿದ ಅಲ್ಪ ಸತ್ಕಾರವನ್ನೇ ತುಂಬಾ ಮೆಚ್ಚಿದಂತೆ ತೋರಿಸಿಕೊಂಡನು. ಕ್ರಮೇಣ ಅವನೊಡನೆ ಪರಿಚಯವನ್ನು ಬೆಳೆಸಿಕೊಂಡು ತನ್ನ ಅಭೀಷ್ಟವನ್ನು ಹೊಂದಿದನು.

ದುಷ್ಟ ಜನರಿಗೆ ಅಲ್ಪ ಅವಕಾಶವನ್ನು ಕೊಟ್ಟರೂ ಕ್ರಮೇಣ ಅವರು ತಮ್ಮ ವ್ಯಾಪ್ತಿಯನ್ನು ಹೆಚ್ಚಿಸಿಕೊಂಡು ಸರ್ವಾಪಹಾರ ಮಾಡುತ್ತಾರೆಂಬುದು ಈ ನ್ಯಾಯದ ತಾತ್ಪರ್ಯ.



## ೯೪. ಮಹಾದರ್ಪಣ ಮುಖದರ್ಶನ ನ್ಯಾಯ

ನಮ್ಮ ಮುಖವನ್ನು ರಾವುಗನ್ನಡಿ (ಭೂತಗನ್ನಡಿ) ಯಲ್ಲಿ ನೋಡಿ-ಕೊಂಡರೆ ಮುಖವು ಬಹು ದೊಡ್ಡದಾಗಿ ಕಾಣುತ್ತದೆ. ಅದೇ ಮುಖವು, ಕಣ್ಣಿನ ಪಾಪೆಯಲ್ಲಿ ಪ್ರತಿಬಿಂಬಿಸಿದಾಗ ಅತಿ ಚಿಕ್ಕದಾಗಿ ಕಾಣಿಸುತ್ತದೆ. ಈ ನ್ಯಾಯದ ತಾತ್ಪರ್ಯವೆಂದರೆ— ಒಂದೇ ವಸ್ತುವು ವ್ಯಂಜಕಭೇದದಿಂದ ಉತ್ಕೃಷ್ಟವಾಗಿಯೂ ತೋರಬಹುದು, ನಿಕೃಷ್ಟವಾಗಿಯೂ ತೋರಬಹುದು. ನಾವು ಬಳಸುವ ಸಾಧನದಲ್ಲಿ ದೋಷವಿದ್ದರೆ ವಸ್ತುವೂ ದುಷ್ಟವಾಗಿ ಕಾಣುತ್ತದೆ.



## ೯೫. ಮಾತ್ಸ್ಯ ನ್ಯಾಯ

ದೊಡ್ಡ ಮೀನು ಸಣ್ಣ ಮೀನನ್ನು ತಿಂದು ಜೀವಿಸುತ್ತದೆ. ಹಾಗೆಯೇ ಬಲಶಾಲಿಗಳು ಅಶಕ್ತರನ್ನು ಶೋಷಿಸುತ್ತಾರೆಂಬುದು ಈ ನ್ಯಾಯದ ಬೋಧೆ.

The fittest will survive ಎಂಬ ಆಂಗ್ಲ ಗಾದೆ ಇದನ್ನೇ ಹೇಳುತ್ತದೆ.



## ೯೬. ಮೃತಂ ಡುಂಡುಭಮಾಸಾದ್ಯ ಕಾಕೋಽಪಿ ಗರುಡಾಯತೇ

ಸತ್ತ ಹಾವು ಸಿಕ್ಕರೆ ಕಾಗೆಯೂ ಗರುಡವಾಗುತ್ತದೆ! ಅಂದರೆ ಅಶಕ್ತರು ಕೈಯಲ್ಲಿ ಸಿಕ್ಕಾಗ ಹೇಡಿಗಳೂ ವೀರರಾಗುತ್ತಾರೆ! ಇದು ಜಗತ್ತಿನ ಜನರ ಸ್ವಭಾವ.

ಇದೇ ರೀತಿ ದಾರ್ಶನಿಕರು ಹೇಳುತ್ತಾರೆ:— 'ವಿಪದಾಬಾಧತೇಽಲ್ಪಾಪಿ ಮನಸ್ತು ಯದಿ ದುರ್ಬಲಂ'— 'ಮನಸ್ಸು ಅಶಕ್ತವಾದಾಗ ಅಲ್ಪ ಕಷ್ಟವೂ ಹೆಚ್ಚಾಗಿ ಪೀಡಿಸುತ್ತದೆ.'



## ೯೭. ಯ ಏವ ಕರೋತಿ ಸ ಏವ ಭುಂಕ್ತೇ
## ( ಮಾಡ್ದುಣ್ಣೋ ಮಹಾರಾಯಾ )

'ಮಾಡಿದವನು ಉಂಡಾನು'— ಎಂಬ ಗಾದೆಯ ಅರ್ಥ ಇದೇ ಆಗಿದೆ. ಸತ್ಕಾರ್ಯವಾದರೆ ಒಳ್ಳೆಯ ಫಲ, ದುಷ್ಕಾರ್ಯವಾದರೆ ಕೆಟ್ಟ ಫಲ— ಇದು ಎಲ್ಲರಿಗೂ ಗೊತ್ತಿದ್ದ ಸಂಗತಿ. ಬೇರೆಯವರಿಗೆ ಫಲದ

ಸಂಬಂಧವಿಲ್ಲ, ಮಾಡಿದವನಿಗೇ ಸಂಬಂಧ— ಎಂಬುದು ಈ ನ್ಯಾಯದ ತಾತ್ಪರ್ಯ. 'ಬಿತ್ತಿದ್ದನ್ನು ಬೆಳೆದುಕೋ' ಈ ಗಾದೆಯ ಅರ್ಥವು ಇದೇ.



## ೯೮. ಯಸ್ಯ ನಾಸ್ತಿ ಪುತ್ರೋ ನ ತಸ್ಯ ಪುತ್ರಸ್ಯ ಕ್ರೀಡನಕಾನಿ ಕ್ರಿಯಂತೇ

ಮಕ್ಕಳೇ (ಮಗನೇ) ಇಲ್ಲದವರು ಆಟಿಕೆಗಳನ್ನು ಸಂಗ್ರಹಿಸುವುದಿಲ್ಲ! ಪ್ರತ್ಯಕ್ಷವಿದ್ದ ವಸ್ತುವಿಗಾಗಿ ಶ್ರಮಿಸಬೇಕೇ ವಿನಃ ಇಲ್ಲದ ವಸ್ತುವಿಗಾಗಿ ಅಲ್ಲ— ಎಂಬುದು ಈ ನ್ಯಾಯದ ತಾತ್ಪರ್ಯ. 'ಮಗುವೇ ಇಲ್ಲದೆ (ಹುಟ್ಟದೆ) ಕುಲಾವಿ ಹೊಲಿಸಿದಂತೆ'— ಎಂಬ ಗಾದೆಯ ಅರ್ಥವೂ ಇದೇ.



## ೯೯. ಪರಮದ್ಯ ಕಪೋತಃ ಶ್ವೋ ಮಯೂರಾತ್

ನಾಳೆ ಸಿಗಬಹುದಾದ ಮಯೂರಕ್ಕಿಂತ (ನವಿಲು) ಇಂದು ದೊರೆತ ಪಾರಿವಾಳವೇ ಶ್ರೇಷ್ಠ. A bird in the hand is worth

two in the bush—ಸಿಕ್ಕಿತವಾದ ಲಾಭವು ಪರಿಮಿತವಾಗಿದ್ದರೂ ಗ್ರಾಹ್ಯವೆಂಬುದು ಈ ನ್ಯಾಯದ ತಾತ್ಪರ್ಯ.



## ೧೦೦ ವಿಷಕೃಮಿ ನ್ಯಾಯ

ವಿಷದಲ್ಲಿ ಪ್ರಾಣಿಗಳನ್ನು ಕೊಲ್ಲುವ ಗುಣ-ಶಕ್ತಿ ಇರುತ್ತದೆ. ಅನೇಕ ಕ್ರಿಮಿಗಳು ವಿಷದಲ್ಲಿಯೇ ಹುಟ್ಟಿ ಬೆಳೆಯುವವು! ಒಬ್ಬರಿಗೆ ವಿಷವಾದದ್ದು ಇನ್ನೊಬ್ಬರಿಗೆ ಅಮೃತವಾಗಬಹುದು; ಹಾಗೆಯೇ ಒಬ್ಬರಿಗೆ ಅಮೃತವಾದದ್ದು ಇನ್ನೊಬ್ಬರಿಗೆ ವಿಷವಾಗುವುದು. ಉದಾ :— ದುಷ್ಟರ ಮಧ್ಯದಲ್ಲಿ ಅಥವಾ ಕಳ್ಳರ ಗುಂಪಿನಲ್ಲಿ ಒಬ್ಬ ಸಜ್ಜನನು ಹಾಯಾಗಿ ಜೀವಿಸಿರುವುದು. ಇದಕ್ಕೆ ಹೋಲಿಕೆಯಾಗಿ— **What is one man's food, is another man's poison.**" ಈ ಇಂಗ್ಲಿಷ್ ಗಾದೆ.



## ೧೦೧. ವೃದ್ಧಕುಮಾರೀ ವಾಕ್ಯ ನ್ಯಾಯ

ಮುಪ್ಪಿನವಳಾಗಿದ್ದರೂ ವಿವಾಹವಾಗದ ಸ್ತ್ರೀಯು ವೃದ್ಧಕುಮಾರಿಯು. ಈ ನ್ಯಾಯದ ವಿವರಣೆಯು ಮಹಾಭಾಷ್ಯದಲ್ಲಿದೆ.

ಒಬ್ಬ ವೃದ್ಧ ಸ್ತ್ರೀಗೆ ದೇವೇಂದ್ರನು ಪ್ರಸನ್ನನಾಗಿ ಒಂದು ವರವನ್ನು ಕೇಳಿಕೊಳ್ಳಲು ಹೇಳಿದನು. ಆಗ ಅವಳು ಹೀಗೆ ವರವನ್ನು ಬೇಡಿ-ಕೊಂಡಳು:— "ನನ್ನ ಮಕ್ಕಳು ಬಂಗಾರದ ತಟ್ಟೆಯಲ್ಲಿ ಬೇಕಾದಷ್ಟು ಪಂಚ-ಪಕ್ವಾನ್ನಗಳನ್ನು ಊಟ ಮಾಡುತ್ತಿರಬೇಕು". ಅವಳು ಕೇಳಿದ್ದೇನೋ ಒಂದೇ ವರವು. ಅದರಲ್ಲಿ ಎಷ್ಟೊಂದು ಇಷ್ಟಾರ್ಥಗಳು ಸೇರಿಕೊಂಡಿವೆ!— ಅವಳ ಮದುವೆಯಾಗಬೇಕು; ಅನೇಕ ಮಕ್ಕಳು ಹುಟ್ಟಬೇಕು. ಹಸು-ಗಳೂ, ಧನ-ಧಾನ್ಯ ಮುಂತಾದ ಸಂಪತ್ತೂ ಸದಾ ಮನೆಯಲ್ಲಿ ತುಂಬಿರಬೇಕು ! ಇದೇ ವೃದ್ಧ ಕುಮಾರಿಯು ಬೇಡಿದ ಚಾತುರ್ಯದ ವರವು.

ಒಂದೇ ಮಾತಿನಿಂದ ಅಥವಾ ಶಬ್ದದಿಂದ ಅನೇಕ ಅರ್ಥಗಳು ಆಗುತ್ತಿದ್ದರೆ, ಆಗ ಈ ನ್ಯಾಯದ ಉಪಯೋಗ.'



## ೧೦೨. ವೃದ್ಧಿಮಿಷ್ಟವತೋ ಮೂಲಮಪಿ ನಷ್ಟಂ

ಬಡ್ಡಿಯ ಆಸೆ ಮಾಡಿದ ಸಾವುಕಾರನ ಆಸಲೂ ಮುಳುಗಿ-ಹೋಯಿತು. ಅನಪೇಕ್ಷಣೀಯ ಹೆಚ್ಚಿನ ಆದಾಯಕ್ಕಾಗಿ ಪ್ರಯತ್ನಿಸಿ

ಮೂಲವನ್ನೇ ಕಳೆದುಕೊಂಡಾಗ ಈ ನ್ಯಾಯದ ಪ್ರಯೋಜನವಾಗುತ್ತದೆ.

ಉದಾ:— "ಭಕ್ಷ್ಯಾಶಯಾ ಹಿ ಮಂಜೂಷಾಂ ದಷ್ಟ್ವಾಖುಸ್ತೇನ ಭಕ್ಷಿತಃ"

ಅರ್ಥ;— ಭಕ್ಷ್ಯದ ಆಸೆಯಿಂದ ಒಂದು ಇಲಿಯು ಹಾವಿನ ಬುಟ್ಟಿಯನ್ನು ಕಡಿದು ಒಳಗೆ ಹೊಕ್ಕಿತು. ಆದರೆ ಅಲ್ಲಿದ್ದ ಹಾವು ಅದನ್ನು ತಿಂದು ಬಿಟ್ಟಿತು.



## ೧೦೩. ವೃಶ್ಚಿಕೀಗರ್ಭ ನ್ಯಾಯ
## (ಕರ್ಕಟಕೀ ಗರ್ಭ ನ್ಯಾಯ)

ತಾಯಿ ಚೇಳಿನ ಗರ್ಭವನ್ನು ( ಹೊಟ್ಟೆಯನ್ನು ) ಭೇದಿಸಿಕೊಂಡು ಚೇಳಿನ ಮರಿಗಳು ಹೊರಗೆ ಬರುತ್ತವೆ. ತಾಯಿಚೇಳು ಸತ್ತುಹೋಗುತ್ತದೆ. ತನಗೆ ಆಶ್ರಯಕೊಟ್ಟ ಪೋಷಕರನ್ನೇ–ಸಾಕಿ ಸಲಹಿದವರನ್ನೇ ನಾಶಮಾಡಿ ತಾನು ಮುಂದಾಗಲು ಯತ್ನಿಸುವ ವ್ಯಕ್ತಿಗೆ ಈ ನ್ಯಾಯವು ಅನ್ವಯಿಸುತ್ತದೆ. ಇದಕ್ಕೆ ಬಾಳೆಯ ಗಿಡದ ಉದಾಹರಣೆಯನ್ನೂ ಕೊಡುತ್ತಾರೆ. ಯಾಕೆಂದರೆ ಬಾಳೆಗೆ ಒಂದೇ ಫಲಕೊಡುವ ಶಕ್ತಿ ಇರುತ್ತದೆ. ಮುಂದೆ ಅದು ಸಿರುಹುಹೋಗಿಯಾಗಿ ಕೊನೆಗೊಳ್ಳುವುದು.

# ೧೦೪. ಶಲಭ ನ್ಯಾಯ

ಶಲಭವೆಂದರೆ ದೀಪದ ಹುಳು – ಪತಂಗ. ದೀಪದಲ್ಲಿ ಅದಕ್ಕೆ ಏನೋ ಆಕರ್ಷಣೆ ಕಂಡುಬಂದೋ, ದೀಪವು ಆಹಾರ ವಸ್ತುವೆಂದು ಭಾವಿಸಿಯೋ ಅದನ್ನು ತಿನ್ನಲು ಹೋಗಿ ಅದು ತಾನೇ ನಾಶವಾಗುತ್ತದೆ.

ದೀಪದ ತೇಜಸ್ಸನ್ನು ನೋಡಿ ಅಸೂಯೆಯಿಂದ ಅದರ ಮೇಲೆ ಎರಗಿ ತಾನೇ ಸುಟ್ಟು ಹೋಗುತ್ತದೆಯೆಂದು ಕವಿಗಳು ವರ್ಣಿಸುತ್ತಾರೆ.

"ಶಲಭತಾಂ ಲಭತಾಮಸುಹೃದ್‌ಗಣಃ"— ಎಂದು ಮಾಘನು ಹೇಳಿದ್ದಾನೆ— "ನಿನ್ನ ಶತ್ರುಗಳು ನಿನ್ನ ಮೇಲೆ ಯುದ್ಧಕ್ಕೆ ಬಂದು, ದೀಪಕ್ಕೆ ಎರಗಿದ ದೀಪದ ಹುಳುಗಳಂತೆ ಧ್ವಂಸಗೊಳ್ಳಲಿ"— ಎಂದು ಉದ್ಧವನು ಶ್ರೀಕೃಷ್ಣನಿಗೆ ಹೇಳುವ ಮಾತಿದು.





## ೧೦೫. ಶವೋದ್ವರ್ತನ ನ್ಯಾಯ
## (ಅರಣ್ಯರೋದನ ನ್ಯಾಯ)

ಶವಕ್ಕೆ (ಹೆಣಕ್ಕೆ) ಸುಗಂಧವನ್ನು ಲೇಪಿಸುವುದು ವ್ಯರ್ಥ. ನಿಷ್ಫಲವಾದ ಪ್ರಯತ್ನಕ್ಕೆ ಇದು ಉದಾಹರಣೆ. "ಅರಣ್ಯರೋದನ ನ್ಯಾಯ"ವು ಇದರ ಹೋಲಿಕೆ.



## ೧೦೬. ಶಿರೋವೇಷ್ಟನೇನ ನಾಸಿಕಾಸ್ಪರ್ಶ ನ್ಯಾಯ

ತಲೆಯ ಹಿಂದಿನಿಂದ ಕೈಯನ್ನು ತಂದು ಮೂಗನ್ನು ಮುಟ್ಟುವುದು- ಕೈಯಿಂದ ನೇರವಾಗಿ ಮೂಗನ್ನು ಹಿಡಿದುಕೊಳ್ಳುವದು ಸರಳವಿದ್ದರೂ, ತಲೆಯ ಸುತ್ತು ಕೈ ತರುವುದು ಮೂರ್ಖತನವಲ್ಲವೇ? ಇದಕ್ಕೆ ಇನ್ನೊಂದು ಹೆಸರು— "ದ್ರಾವಿಡ ಪ್ರಾಣಾಯಾಮ" ಪ್ರಾಣಾಯಾಮವನ್ನು ಮಾಡು- ವಾಗ ಮೂಗನ್ನು ಹಿಡಿದುಕೊಂಡು ಶ್ವಾಸನಿರೋಧ ಮಾಡಬೇಕೆಂದು ಶಾಸ್ತ್ರದಲ್ಲಿ ಹೇಳಿದೆ. ಆದರೆ ಕೈಯಿಂದ ತಲೆಯನ್ನು ಬಳಸುವದು ದ್ರಾವಿಡರ ಸಂಪ್ರದಾಯ.

ಸರಳವಾಗಿ ಮಾಡಬಹುದಾದ ಕೆಲಸವನ್ನು ವ್ಯರ್ಥವಾಗಿ ಬಳಸು

ದಾರಿಯಿಂದ ಮಾಡುವುದು ಸರಿಯಾದುದಲ್ಲವೆಂದು ಈ ನ್ಯಾಯದ ತಾತ್ಪರ್ಯ. "ಕೊಂಕಣ ಸುತ್ತಿ ಮೈಲಾರಕ್ಕೆ ಹೋದ ಹಾಗೆ"— ಎಂಬ ಕನ್ನಡ ಗಾದೆ ಇದನ್ನು ಹೋಲುತ್ತದೆ.



## ೧೦೭. ಶ್ವಪುಚ್ಛೋನ್ನಾಮನ ನ್ಯಾಯ

ನಾಯಿಯ ಬಾಲ ಯಾವಾಗಲೂ ಡೊಂಕೇ. ಅದನ್ನು ನೆಟ್ಟಗೆ ಮಾಡಲು ಯತ್ನಿಸುವುದು ವ್ಯರ್ಥ. ಅದರಂತೆ, ಮೂರ್ಖನಿಗೆ ಬುದ್ಧಿ ಹೇಳುವುದು ನಿರರ್ಥಕ. ನಾಯಿಯ ಬಾಲವು ಎಷ್ಟು ಪ್ರಯತ್ನಿಸಿದರೂ ಹೇಗೆ ಸರಳವಾಗಲಾರದೋ, ಹಾಗೆಯೇ ಎಷ್ಟು ಬುದ್ಧಿ ಹೇಳಿದರೂ ಅವರು ತಮ್ಮ ಸ್ವಭಾವವನ್ನು ಬದಲಾಯಿಸುವುದಿಲ್ಲ.



## ೧೦೮. ಶಕೃತ್ ಪ್ರವೃತ್ತಾಯಾಃ ಕಿಮವಗುಂಠನೇನ

ಒಮ್ಮೆ ಹೊಸ್ತಿಲು ದಾಟಿದವಳಿಗೆ ಬುರುಕಿಯೇಕೆ ಬೇಕು? ಯಾರೇ ಆಗ

ಒಮ್ಮೆ ಅಡ್ಡದಾರಿಗೆ ಬಿದ್ದರೆ ಮುಗಿಯಿತು. ಅವಳು ಗರತಿ–ಪತಿವ್ರತೆ–ಯೆಂದೆನಿಸಿಕೊಳ್ಳಲು ಸಾಧ್ಯವಿಲ್ಲ. ಒಮ್ಮೆಯಾದರೂ ಅದು ಅಪರಾಧವೇ. ಸಮಾಜವು ಅದನ್ನು ಕ್ಷಮಿಸಲಾರದು.

ಶಾಸ್ತ್ರದಲ್ಲಿ ಕೆಲವು ಸಾಂಪ್ರದಾಯಿಕ ನಿಯಮಗಳಿರುತ್ತವೆ. ಎಲ್ಲಿ–ಯಾದರೂ ಆ ನಿಯಮವು ವ್ಯಭಿಚರಿತವಾದರೂ ಸಾಕು. ಅದನ್ನು ಬೇರೆಡೆಗೆ ಆದರಿಸಲೇ ಬೇಕಾಗಿಲ್ಲ. ಅದಕ್ಕೆ ವ್ಯತಿರಿಕ್ತವಾಗಿ ವಿವಾದವನ್ನು ಬೆಳೆಸಬಹುದು; ಸಿದ್ಧಾಂತವನ್ನು ಕಟ್ಟಬಹುದು. ಅಂಥ ಪ್ರಸಂಗದಲ್ಲಿ ನಿಯಮಗಳನ್ನು ಅಲ್ಲಗಳೆಯುವುದಕ್ಕೆ ಈ ನ್ಯಾಯವು ಉಪಯುಕ್ತವಾಗು–ತ್ತದೆ.



## ೧೦೯. ಸದೃಶಾತ್ ಸದೃಶೋದ್ಭವಃ

ಎಂಥ ಬೀಜವೋ ಅಂಥ ಫಲ. ಒಳ್ಳೆಯದರಿಂದ ಒಳ್ಳೆಯದು; ಕೆಟ್ಟದರಿಂದ ಕೆಟ್ಟದು. ಮನುಷ್ಯನಿಂದ ಮನುಷ್ಯನೂ, ಪಶುವಿನಿಂದ ಪಶುವೂ, ಪಕ್ಷಿಯಿಂದ ಪಕ್ಷಿಯೂ, ಕೀಟದಿಂದ ಕೀಟವೂ, ಮರದಿಂದ ಮರವೂ ಹುಟ್ಟುತ್ತವೆ. ಇಷ್ಟೇ ಅಲ್ಲ, ಚಿಗರೆಯಿಂದ ಚಿಗರೆ ಹುಟ್ಟು–ವುದೇ ವಿನಃ ತೋಳ ಹುಟ್ಟದು. ಕಾಗೆಯಿಂದ ಗೂಗೆ ಹುಟ್ಟದು.

ಇದೊಂದು ಸಾಮಾನ್ಯ ನಿಯಮವು— 'ಬೀಜವಿದ್ದಂತೆ ಫಲ".



## ೧೧೦. ಸರ್ವಂ ಬಲವತಃ ಪಥ್ಯಂ

ಬಲವಂತನಿಗೆ ಸರ್ವವೂ ಹಿತಕರವಾಗುವುದು. ಜೀರ್ಣಶಕ್ತಿಯ ಬಲ ಸಾಕಷ್ಟಿದ್ದರೆ ಎಂಥ ಆಹಾರವನ್ನಾದರೂ ತಿಂದು ಜೀರ್ಣಿಸಬಹುದು. ಧನಬಲವಿದ್ದರೆ ಎಂಥ ಸಾಹಸಕ್ಕಾದರೂ ಕೈಹಾಕಬಹುದು. ಅಧಿಕಾರ ಬಲವಿದ್ದರೆ ಎಂಥ ಅಕಾರ್ಯವನ್ನಾದರೂ ಮಾಡಿ ದಕ್ಕಿಸಿಕೊಳ್ಳಬಹುದು. **Might is right** ಎಂಬ ಇಂಗ್ಲಿಷ್ ಗಾದೆಯನ್ನು ಇದು ಕೆಲ ಅಂಶಗಳಲ್ಲಿ ಹೋಲುತ್ತದೆ. ಪರಮೇಶ್ವರನು 'ಹಾಲಾಹಲ' ವಿಷವನ್ನೇ ಕುಡಿದನು. ಅವನಿಗೇನೂ ಆಗಲಿಲ್ಲ. ಬಲವಂತರ ಕೆಲಸಕ್ಕೆ ಬಲಹೀನರು ಕೈಹಾಕಬಾರದೆಂದೂ ಈ ನ್ಯಾಯದ ಅಭಿಪ್ರಾಯ.



## ೧೧೧. ಸರ್ವನಾಶೇ ಸಮುತ್ಪನ್ನೇ ಅರ್ಧಂ ತ್ಯಜತಿ ಪಂಡಿತಃ

ಎಲ್ಲವೂ ನಾಶವಾಗಿ ಹೋಗುವ ಪ್ರಸಂಗ ಬಂದಾಗ ವಿದ್ವಾಂಸನು ಅರ್ಧವನ್ನು ಬಿಟ್ಟುಕೊಡುತ್ತಾನೆ. ಅಂದರೆ, ಉಳಿದ ಅರ್ಧವು ತನಗೆ ಉಳಿಯುವ ಸಂದರ್ಭದಲ್ಲಿ ಮಾತ್ರ ಹೀಗೆ ಅರ್ಧ ಬಿಟ್ಟುಕೊಡುತ್ತಾನೆ.

ಇದಕ್ಕೆ ಉತ್ತಮ ಉದಾಹರಣೆಯೆಂದರೆ— ಭಾರತದ ಸ್ವಾತಂತ್ರ್ಯ

ಹೋರಾಟದ ಕಾಲಕ್ಕೆ ಗಾಂಧೀಜಿ ಮುಂತಾದ ಮುಂದಾಳುಗಳು ಈ ನ್ಯಾಯವನ್ನನುಸರಿಸಿಯೇ ಪಾಕಿಸ್ತಾನದ ನಿರ್ಮಾಣಕ್ಕೆ ಒಪ್ಪಿಕೊಂಡರು. ಭಾರತಕ್ಕೆ ಸ್ವಾತಂತ್ರ್ಯವೇ ಸಿಗುವುದಿಲ್ಲ. ಹಿಂದೂ-ಮುಸಲ್ಮಾನರಲ್ಲಿ ಯಾದವೀಕಲಹ (ಅಂತರ್ಯುದ್ಧ) ನಡೆದು ಪ್ರಜಾಹಿಂಸೆಯಾಗುತ್ತದೆ— ಎಂಬ ಸಂದರ್ಭದಲ್ಲಿ ಪಾಕಿಸ್ತಾನವನ್ನು ಕೊಡಲು ಸಮ್ಮತಿಸಿ, ಉಳಿದ ಬೃಹದ್ ಭಾಗಕ್ಕೆ ಸ್ವಾತಂತ್ರ್ಯವನ್ನು ಪಡೆಯುವುದೇ ಒಳ್ಳೆಯದೆಂದು ಅವರೆಲ್ಲ ಭಾವಿಸಿದರು.



## ೧೧೨. ಸಿಂಹಾವಲೋಕನ ನ್ಯಾಯ

ಸಿಂಹವು ಅರಣ್ಯದಲ್ಲಿ ಸಂಚರಿಸುವಾಗ ಅಲ್ಲಲ್ಲಿ ನಿಂತು, ಹಿಂದೆ ನೋಡುತ್ತ ಹೋಗುತ್ತದಂತೆ. ಅದು ಸಿಂಹದ ಸ್ವಭಾವ. ಬಹುಶಃ, ತಾನು ಕೊಂದು ಹಾಕಿರುವ ಪ್ರಾಣಿಯನ್ನು ಅಪಹರಿಸಲು ಬೇರೊಂದು ಸಿಂಹವು ಬಂದಿತೇನೋ ಎಂಬ ಸಂದೇಹವು ಅದಕ್ಕೆ ಇರಬಹುದು.

ಹಾಗೆಯೇ, ಶಾಸ್ತ್ರಗ್ರಂಥಗಳಲ್ಲಿಯೂ ಪ್ರತಿವಾದಿಯನ್ನು ಖಂಡಿಸಿ, ತನ್ನ ಸಿದ್ಧಾಂತವನ್ನು ಸ್ಥಾಪಿಸಿದ ನಂತರ, ಪುನಃ ಹಿಂದಿನ ವಿಷಯವನ್ನು ಸಂಕ್ಷೇಪವಾಗಿ ಪರ್ಯಾಲೋಚಿಸುವುದುಂಟು. ಆಗ ಈ ನ್ಯಾಯ ಉಪಯೋಗವಾಗುತ್ತದೆ.

ನಾವು ನಮ್ಮ ದಿನಚರಿ ಬರೆಯುವಾಗ ಸಹ, ನಾವು ಇದು ವರೆಗೆ ಏನೇನು ಮಾಡಿದೆವು, ಇದರ ಫಲಿತಾಂಶವೇನು? ಎಂದು ವಿಮರ್ಶಿಸಿ–

ಕೊಳ್ಳುವುದು ಅಗತ್ಯವಾಗಿದೆ. ಅದರಿಂದ ಮುಂದೆ ನಾವು ಮಾಡಬೇಕಾದ ಕಾರ್ಯಗಳನ್ನು ಗೊತ್ತುಪಡಿಸಿಕೊಳ್ಳಲು ಅನುಕೂಲವಾಗುತ್ತದೆ



## ೧೧೩. ಸಿಕತಾ ಕೂಪ ನ್ಯಾಯ

ಸಿಕತಾ ಎಂದರೆ ಮರಳು (ಉಸುಕು). ಉಸುಕಿನಲ್ಲಿ ಭಾವಿಯನ್ನು ತೋಡಿದಷ್ಟೂ ಕುಸಿಯುತ್ತ ಹೋಗುತ್ತದೆ ಆದ್ದರಿಂದ, ಅದು ನಿರರ್ಥಕವಾದ ಕಾರ್ಯ. ನೀರು ಸಿಗುವುದು ಸಾಧ್ಯವೇ ಇಲ್ಲ. ಹುರುಳಿಲ್ಲದ ವಾದವನ್ನು ನಿಂದಿಸುವುದಕ್ಕೆ ಈ ನ್ಯಾಯವನ್ನು ಬಳಸುತ್ತಾರೆ.

ಬೌದ್ಧರಲ್ಲಿ ನೈನಾರಿಕರೆಂಬ ಒಂದು ಪಂಗಡವಿದೆ. ಅವರ ವಾದವನ್ನು ದೂಷಿಸುವಾಗ ಬ್ರಹ್ಮಸೂತ್ರಭಾಷ್ಯದಲ್ಲಿ ಶ್ರೀ ಶಂಕರಾಚಾರ್ಯರು ಈ ನ್ಯಾಯವನ್ನು ಉಪಯೋಗಿಸಿದ್ದಾರೆ. (ಬ್ರ. ಸೂ. ೨-೨-೩೨).



## ೧೧೪. ಸಿಕತಾತೈಲ ನ್ಯಾಯ

ಉಸುಕಿನಿಂದ ಎಣ್ಣೆ ತೆಗೆದ ಹಾಗೆ. 'ಮೊಲಕ್ಕೆ ಕೊಂಬು ಇವೆ!' ಎಂಬ ಅಸತ್ಯವಾದ ವಿಷಯವನ್ನು ವರ್ಣಿಸಲು— ಇದು ಉಪಯುಕ್ತ-ವಾಗುತ್ತದೆ.

ಭರ್ತೃಹರಿಯು ತನ್ನ ನೀತಿಶತಕದ ಒಂದು ಶ್ಲೋಕದಲ್ಲಿ ಹೀಗೆ ಹೇಳುತ್ತಾನೆ:—

"ಕಷ್ಟಪಟ್ಟರೆ ಒಂದು ವೇಳೆ ಮರಳಿನಲ್ಲಾದರೂ ಎಣ್ಣೆಯನ್ನು ತೆಗೆಯಬಹುದು; ಬಾಯಾರಿದವನು ಬಿಸಿಲುಗುದುರೆಯಲ್ಲಿ ನೀರನ್ನೂ ಕುಡ-ಯಬಹುದು; ಅಲೆದಾಡಿ ಹುಡುಕಿದರೆ ಯಾವಾಗಲಾದರೂ ಮೊಲದ ಕೊಂಬು ಸಿಕ್ಕರೂ ಸಿಗಬಹುದು— ಆದರೆ ಹಟಮಾರಿಗಳಾದ ಮೂರ್ಖ ಜನರ ಮನಸ್ಸನ್ನು ಬದಲಿಸಲು ಸಾಧ್ಯವಿಲ್ಲ"



## ೧೧೫. ಸುಂದೋಪಸುಂದ ನ್ಯಾಯ

ಸುಂದ, ಉಪಸುಂದ ಎಂಬ ಇಬ್ಬರು ದೈತ್ಯರಿದ್ದರು. ಅವರು ಸಹೋದರರು. ಸಹೋದರ ಪ್ರೇಮ ಅನ್ಯೋನ್ಯವಾಗಿತ್ತು. ಅವರಿಬ್ಬರು

## ೧೧೬. ಸೂತ್ರಬದ್ಧ ಶಕುನಿ ನ್ಯಾಯ

ದಾರದಿಂದ ಕಟ್ಟಿಹಾಕಿದ ಪಕ್ಷಿಯು ಆಕಾಶದಲ್ಲಿ ತುಸು ದೂರ ಮಾತ್ರ ಹಾರಬಲ್ಲದು. ಆದರೂ ಬೇರೆಬೇರೆ ದಿಕ್ಕಿಗೆ ಹಾರಾಡಿ ತಪ್ಪಿಸಿ-ಕೊಳ್ಳಲು ಪ್ರಯತ್ನಿಸುವುದು. ನೂಲಿನ ಕಟ್ಟನ್ನು ತಪ್ಪಿಸಿಕೊಳ್ಳಲಾರದೆ ಮತ್ತೆ ಕೆಳಗಿಳಿಯುವುದು.

ಅದರಂತೆಯೇ ಸಂಸಾರಬಂಧನದಲ್ಲಿ ಸಿಲುಕಿಕೊಂಡಿರುವ ಮನುಷ್ಯನೂ ಸಂಸಾರದಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿ, ತಪ್ಪಿಸಿಕೊಳ್ಳಲಾರದೆ ತೊಳಲುತ್ತಿರುವನು. ಸ್ವಾತಂತ್ರ್ಯ ಪರಿಮಿತವಾದದ್ದು. ಒಂದು ಕಟ್ಟು-ಪಾಡಿಗೊಳಪಟ್ಟು ಮಾತ್ರ ಕೆಲಸಮಾಡಬಹುದು ಎಂಬುದನ್ನು ಸೂಚಿಸುವು-ದಕ್ಕೆ ಈ ನ್ಯಾಯವನ್ನು ವಿನಿಯೋಗಿಸಬಹುದು.



## ೧೧೭. ಸ್ಥಾಲೀ ಪುಲಾಕ ನ್ಯಾಯ

ಪುಲಾಕ=ಅನ್ನದ ಅಗುಳು. ಅನ್ನವಾಗಿದೆಯೇ ಎಂಬುದನ್ನು ಪರೀ-ಕ್ಷಿಸಲು ಒಂದು ಅಗುಳನ್ನು ಹಿಚುಕಿ ನೋಡುತ್ತಾರೆ. ಅದು ಬೆಂದಿದ್ದರೆ ಎಲ್ಲವೂ ಬೆಂದಂತೆ ಎಂದು ಸಿದ್ಧಾಂತ. ಇಲ್ಲವಾದರೆ ಯಾವುದೂ ಬೆಂದಿಲ್ಲ-

ಬ್ರಹ್ಮದೇವನನ್ನು ಕುರಿತು ಕಠಿಣ ತಪಸ್ಸು ಮಾಡಹತ್ತಿದರು. ಅದಕ್ಕೆ ಮೆಚ್ಚಿ ಬ್ರಹ್ಮನು ವರ ಕೇಳಲು ಹೇಳಿದನು. ತಮ್ಮನ್ನು ಯಾರೂ ಕೊಲ್ಲಬಾರದೆಂದು ಅವರು ವರವನ್ನು ಕೇಳಿದರು. ಆದರೆ ಬ್ರಹ್ಮನು, ಮರಣವೇ ಇಲ್ಲದಂತೆ ವರವನ್ನು ಕೊಡಲು ಒಪ್ಪಲಿಲ್ಲ. ಆಗ ಆ ದೈತ್ಯರು ಬುದ್ಧಿವಂತಿಕೆಯಿಂದ ಹೀಗೆ ವರವನ್ನು ಕೇಳಿದರು— "ನಮ್ಮಿಬ್ಬರಲ್ಲಿಯೇ ಒಬ್ಬರಿಂದ ಒಬ್ಬರಿಗೆ ಮರಣ ಒದಗಬೇಕೇ ಹೊರತು, ಇತರ ಯಾರಿಂದಲೂ ಬೇಡ." ಬ್ರಹ್ಮನು 'ತಥಾಸ್ತು' ಎಂದು ವರವಿತ್ತನು. ಅನ್ಯೋನ್ಯವಿದ್ದ ತಾವು ಒಮ್ಮೆಯೂ ಜಗಳವಾಡುವುದಿಲ್ಲವೆಂದು ಅವರು ತಿಳಿದಿದ್ದರು.

ಆದ್ದರಿಂದ ಅವರೀರ್ವರೂ ಜಗತ್ತಿನ ಜನರಿಗೆ ತುಂಬಾ ಪೀಡೆ ಕೊಡಹತ್ತಿದರು. ಇವರ ಕಾಟವು ಮಿತಿಮೀರಿದಾಗ ಬ್ರಹ್ಮದೇವನ ಆಜ್ಞೆಯಂತೆ ವಿಶ್ವಕರ್ಮನು 'ತಿಲೋತ್ತಮೆ' ಎಂಬ ಅಪ್ಸರೆಯನ್ನು ಸೃಷ್ಟಿಸಿದನು. ಅವಳು ಅತ್ಯಂತ ಸುಂದರಿ. ಅವಳನ್ನು ನೋಡಿ ಸುಂದೋಪಸುಂದರು ಮೋಹಗೊಂಡರು. ಇಬ್ಬರೂ ಅವಳ ಒಂದೊಂದು ಕೈಯನ್ನು ಹಿಡಿದು ನಿಂತರು. ನನಗೆ....... ನನಗೆ ಎಂದು ಇಬ್ಬರೂ ಕಾದಾಡಹತ್ತಿದರು. ಅದೇ ವೇಳೆಗೆ ತಿಲೋತ್ತಮೆ— ನಿಮ್ಮಲ್ಲಿ ಶೂರನಾದವನನ್ನು ನಾನು ಲಗ್ನವಾಗುತ್ತೇನೆ.— ಎಂದು ಹೇಳಿದಳು. ಆಯಿತು; ಇಬ್ಬರೂ ಭಯಂಕರವಾಗಿ ಕಾದಾಡಿ ಸತ್ತುಹೋದರು.

ಹೀಗೆ ಪರಸ್ಪರವಾಗಿ ಒಂದು ಮತ್ತೊಂದನ್ನು ನಾಶಗೊಳಿಸುತ್ತದೆ, ಎಂಬುದನ್ನು ವಿವರಿಸಲು ಈ ನ್ಯಾಯದ ಉಪಯೋಗ.



ಅನ್ನವಾಗಿಲ್ಲವೆಂದು ತಿಳಿಯಬಹುದು.

ಹೀಗೆ ಏಕಾಂಶವನ್ನು ಪರೀಕ್ಷಿಸಿ ಸಮೂಹದ ಯೋಗ್ಯತೆಯನ್ನು ಊಹಿಸುವ ಪದ್ಧತಿಯನ್ನು ಈ ನ್ಯಾಯವು ವಿವರಿಸುತ್ತದೆ.

ಅಭ್ಯರ್ಥಿಯನ್ನು ಪರೀಕ್ಷಿಸುವುದೂ ಕೂಡ ಹೀಗೆಯೇ ಅಲ್ಲವೇ?



## ೧೧೮. ಸೋಪಾನಾರೋಹಣ ನ್ಯಾಯ

ಒಂದೊಂದಾಗಿ ಮೆಟ್ಟಿಲುಗಳನ್ನು ಹತ್ತುತ್ತ ಅಟ್ಟವನ್ನು (ಮಹಡಿ) ಸೇರುತ್ತೇವೆ. ಭೂಮಿಯಿಂದ ಅಟ್ಟಕ್ಕೆ ಜಿಗಿಯುವುದು ಸಾಧ್ಯವಿಲ್ಲ; ಜಿಗಿದರೆ ತುಂಬ ಅಪಾಯಕಾರಿ. ಅರ್ಥಾತ್ ಯಾವುದೇ ಕಾರ್ಯವನ್ನು ಹಂತಹಂತವಾಗಿ ಮಾಡಿ ಮುಗಿಸಬೇಕೆಂಬುದು ಈ ನ್ಯಾಯದ ತಾತ್ಪರ್ಯ.



## ೧೧೯. ಸ್ಥಾವರ ಜಂಗಮ ವಿಷ ನ್ಯಾಯ

ಮೂಲಿಕೆಗಳಿಂದ ಇಲ್ಲವೆ ಲೋಹಗಳಿಂದ ಉತ್ಪನ್ನವಾಗುವ ವಿಷವು

ಸ್ಥಾವರ ವಿಷ. ಪ್ರಾಣಿಗಳ ವಿಷವು ಜಂಗಮ ವಿಷ. ಇವೆರಡೂ ಭಯಂಕರವಾದವುಗಳೇ— ಮರಣಕ್ಕೆ ಗುರಿಮಾಡುವಂಥವು. ಆದರೂ ಇವು ಪರಸ್ಪರ ವಿರುದ್ಧ. ಜಂಗಮ ವಿಷದ ಅಪಾಯವನ್ನು ಸ್ಥಾವರ ವಿಷವೂ, ಸ್ಥಾವರ ವಿಷದಿಂದ ಒದಗುವ ವಿಪತ್ತನ್ನು ಜಂಗಮ ವಿಷವೂ ಪರಿಹರಿಸುತ್ತದೆ-ಯೆಂದು ಹೇಳಲಾಗುತ್ತದೆ. ಉದಾ:— ಸರ್ಪವಿಷಕ್ಕೆ ವತ್ಸನಾಭಿಯು ಔಷಧವೆಂದು ವೈದ್ಯರ ಹೇಳಿಕೆ

ಇದರಂತೆ, ಕೌರವರು ಭೀಮಸೇನನಿಗೆ ವಿಷಹಾಕಿ ನದಿಯಲ್ಲಿ ನೂಕಿ-ದ್ದರು. ಆಗ ಅವನು ಪಾತಾಳಕ್ಕೆ ಮುಟ್ಟಿದನು. ಅಲ್ಲಿ ಭಯಂಕರನಾದ ವಿಷವುಳ್ಳ ಸರ್ಪಗಳು ಅವನನ್ನು ಕಚ್ಚಿದವು. ಆದರಿಂದ ಅವನು ತಿಂದ ವಿಷದ ಶಕ್ತಿ ಕಡಿಮೆಯಾಗಿ ಅವನಿಗೆ ಎಚ್ಚರವಾಯಿತು—ಎಂಬುದು ಎಲ್ಲ-ರಿಗೂ ಗೊತ್ತಿದ್ದ ವಿಷಯ. ವಾದಕ್ಕೆ ಪ್ರತಿವಾದವನ್ನು ಹೂಡಿ ಅಥವಾ ಯುಕ್ತಿಗೆ ಪ್ರತಿಯುಕ್ತಿಯನ್ನು ಹೂಡಿ ಕಾರ್ಯವು ಸಾಗದಂತೆ ಮಾಡಿ-ದಾಗ ಈ ನ್ಯಾಯವನ್ನು ಉಪಯೋಗಿಸಬಹುದು.



## ೧೩೦. ಸ್ಥೂಣಾನಿಖನನ ನ್ಯಾಯ

ಕಂಬವನ್ನು ಹುಗಿಯುವ ನ್ಯಾಯ. (ಸ್ಥೂಣಾ=ಕಂಬ). ಕಂಬ-ವನ್ನು ನೆಲದಲ್ಲಿ ಹುಗಿಯಬೇಕಾದಾಗ, ತಗ್ಗಿನಲ್ಲಿ ಅದನ್ನು ಇಟ್ಟು, ಸುತ್ತಲೂ ಮಣ್ಣು-ಕಲ್ಲು ಹಾಕುತ್ತ, ಅಲ್ಲಾಡಿಸಿ ನೋಡುತ್ತ, ಸುತ್ತಲೂ ಜಜ್ಜಿ ಹೂಳುತ್ತೇವೆ. ಇದರ ಉದ್ದೇಶವೆಂದರೆ— ಕಂಬವು ಸ್ಥಿರವಾಗಿ ನಿಲ್ಲಲೆಂಬುದು.

ಇದೇ ಪ್ರಕಾರ ಒಂದು ಸಿದ್ಧಾಂತವನ್ನು ದೃಢವಾಗಿ ಸ್ಥಾಪಿಸಬೇಕಾದರೆ, ಅನೇಕ ರೀತಿಯ ಶಂಕೆಗಳನ್ನು, ಪ್ರತಿವಾದಗಳನ್ನು ನಿವಾರಿಸಿ, ಸಮರ್ಥ ರೀತಿಯಿಂದ ಪ್ರತಿಪಾದಿಸಿ ಅವುಗಳಿಗೆ ಸಮಾಧಾನ ಹೇಳಬೇಕು. ಒಮ್ಮೆ ಸಿದ್ಧಾಂತವಾದಂತೆ ತೋರಿದರೂ ಪುನಃ ಇನ್ನೊಂದು ದೃಷ್ಟಿಯಿಂದ ಆಕ್ಷೇಪಿಸಿ ಉತ್ತರಿಸಬೇಕಾಗುತ್ತದೆ. ಇಂತಹ ಸಂದರ್ಭದಲ್ಲಿ ದೃಷ್ಟಾಂತವಾಗಿ ಈ ನ್ಯಾಯವನ್ನು ಬಳಸುತ್ತಾರೆ.



## ೧೨೧. ಸ್ವವಿಷಮೂರ್ಛಿತೋ ಭುಜಂಗಃ ಆತ್ಮಾನಮೇವ ದಶತಿ

ತನ್ನ ವಿಷದಿಂದಲೇ ಮೂರ್ಛೆಹೋದ ಸರ್ಪವು ತನ್ನನ್ನೇ ಕಚ್ಚಿಕೊಳ್ಳುತ್ತದೆ! ಅದರಂತೆ, ಮಾನವನು ಸಹ ತಾನು ಮಾಡಿದ ತಪ್ಪುಗಳಿಗಾಗಿ ತಾನೇ ರೇಗಿಕೊಂಡು ತನ್ನನ್ನು ತಾನೇ ಪರಿಚಿಕೊಳ್ಳುವುದುಂಟು. ತಪ್ಪುಗಳ ಮೇಲೆ ತಪ್ಪು ಮಾಡಿ ತಾನೇ ಗಂಡಾಂತರಕ್ಕೆ ತುತ್ತಾದಾಗ ಈ ನ್ಯಾಯವು ಬಳಕೆಗೆ ಬರುತ್ತದೆ.



## ೧೨೨. ಸ್ವಾಂಗುಲಿಜ್ವಾಲಯಾ ಪರದಾಹ ನ್ಯಾಯ

ತನ್ನ ಬೆರಳಿಗೆ ಬಟ್ಟೆ ಸುತ್ತಿಕೊಂಡು ಬೆಂಕಿ ತಗುಲಿಸಿ, ಬೇರೊಬ್ಬರನ್ನು ಸುಡುವುದಕ್ಕೆ ಪ್ರಯತ್ನಿಸುವ ನ್ಯಾಯ! ಬೇರೊಬ್ಬರ ಮೈಗೆ ಬೆಂಕಿ ಹತ್ತುವುದೋ ಇಲ್ಲವೋ ತನ್ನ ಬೆರಳಂತೂ ಸುಟ್ಟೇ ಸುಡುವುದು.

ತಾನು ಹಾಳಾಗುವುದರ ಜೊತೆಗೆ ಇನ್ನೊಬ್ಬರನ್ನು ಹಾಳುಮಾಡಲು ಪ್ರಯತ್ನಿಸುನಾಗ ಈ ನ್ಯಾಯದ ಬಳಕೆಯಾಗಬಲ್ಲುದು. 'ಸವತಿ ರಂಡೆಯಾಗಲಿ' ಎಂಬ ಕನ್ನಡ ಗಾದೆ ಇದನ್ನು ಹೋಲುತ್ತದೆ.



## ೧೨೩. ಸ್ವೇದಜ ನಿಮಿತ್ತೇನ ಶಾಕಟತ್ಯಾಗ ನ್ಯಾಯ

ಸ್ವೇದಜವೆಂದರೆ ಹೇನು ಅಥವಾ ಕೂರೆ. ಶಾಕಟವೆಂದರೆ ಬಟ್ಟೆ. ಬಟ್ಟೆಯಲ್ಲಿ ಕೂರಿ (ಹೇನು) ಇದೆಯೆಂದು ಬಟ್ಟೆಯನ್ನೇ ಬಿಸಾಟುವುದು! ಛತ್ರದಲ್ಲಿ ತೌಡುಯಿದೆಯೆಂದು ಛತ್ರವನ್ನು ಯಾರಾದರೂ ಎಸಯುವರೇ ? ಯಾವ ಅಂಶವು ನಿರುಪಯುಕ್ತವೋ ಅದನ್ನು ಬಿಟ್ಟು ಮುಖ್ಯ ವಸ್ತುವನ್ನು ಉಳಿಸಿಕೊಳ್ಳಬೇಕು; ಅದೇ ಬುದ್ಧಿವಂತಿಕೆ. ಈ ನ್ಯಾಯದ ತಾತ್ಪರ್ಯ ಸ್ಪಷ್ಟವಿದೆ!

## ೧೨೪. ಚಿತ್ರತುರಗ ನ್ಯಾಯ

ಕುದುರೆಯ ಚಿತ್ರವನ್ನು ತೋರಿಸಿ, ಇದು ಕುದುರೆಯೆಂದು ನಾವು ಮಕ್ಕಳಿಗೆ ಕಲಿಸುತ್ತೇವೆ. ಆದರೆ ಚಿತ್ರದಲ್ಲಿಯ ಕುದುರೆ ನಿಜವಾದ ಕುದುರೆಯಲ್ಲವೆಂಬುದು ಎಲ್ಲರಿಗೂ ಗೊತ್ತು. ಆದರೂ ಮಕ್ಕಳು ಚಿತ್ರದ ಕುದುರೆಯೇ ಕುದುರೆಯೆಂದು ತಿಳಿದುಕೊಳ್ಳುತ್ತಾರೆ. ಯಾಕೆಂದರೆ ಅದು (ಚಿತ್ರ) ನಿಜವಾದ ಕುದುರೆಯ ಜ್ಞಾನಕ್ಕೆ ಸಹಾಯವಾಗುತ್ತದೆ. ಮಾನವನು ಅಸತ್ಯ ಮಾರ್ಗದಲ್ಲಿ ನಿಂತು ಸತ್ಯವನ್ನು ಹೊಂದಲು ಪ್ರಯತ್ನಿಸುತ್ತಾನೆ. ಅದ್ವೈತಿಗೆ ವಾಸ್ತವವಾಗಿ ದ್ವೈತವಿಲ್ಲ. ಆದರೂ ವ್ಯವಹಾರದಲ್ಲಿ ಅದನ್ನು ಒಪ್ಪಲೇಬೇಕಾಗುತ್ತದೆ. ಇಂಥ ಪ್ರಸಂಗದಲ್ಲಿ ಈ ನ್ಯಾಯದ ಉಪಯೋಗ.



## ೧೨೫. ಭೃಂಗಕೀಟ ನ್ಯಾಯ

ಭೃಂಗವೆಂದರೆ ಭ್ರಮರ. ಇದು ರೆಕ್ಕೆಯುಳ್ಳ ಒಂದು ಹುಳ. ಇದಕ್ಕೆ 'ಕುರುಡಿ ಕುತಾರಿ' ಎಂದೂ ಕೆಲವರು ಕರೆಯುತ್ತಾರೆ.

ಇದು ಮಣ್ಣಿನಿಂದ ತನ್ನ ಗೂಡು ಕಟ್ಟುತ್ತದೆ. ಆ ಗೂಡಿನಲ್ಲಿ ಅನೇಕ ಕೀಟಗಳನ್ನು (ಕೀಡೆ) ತಂದು ಇಟ್ಟುಕೊಳ್ಳುತ್ತದೆ. ಗೂಡಿನ ಸುತ್ತಲೂ ಹಾರಾಡುತ್ತದೆ. ಅದು ತಂದಿಟ್ಟ ಕೀಟವು ಭೃಂಗದ ಸಹವಾಸದಿಂದ

ಅದರಂತೆಯೇ— ಅಂದರೆ ಭೃಂಗವೇ ಆಗಿಬಿಡುತ್ತದೆ! ತಾತ್ಪರ್ಯ : ದುರ್ಜನರ ಸಂಗದಿಂದ ದುರ್ಜನರೂ, ಸಜ್ಜನರ ಸಂಗದಿಂದ ಸಜ್ಜನರೂ ಆಗುತ್ತಾರೆ. ಇದೇ ಈ ನ್ಯಾಯದ ಬೋಧೆ.



## ೧೨೬. ಶ್ಯಾಲಶುನಕ ನ್ಯಾಯ

ಶ್ಯಾಲನೆಂದರೆ ಬೀಗ—ಪತ್ನಿಯ ಸಹೋದರ, ಅಂದರೆ ಭಾವ-ಮೈದುನ. ಒಬ್ಬ ತರುಣನು ಆದೇ ಲಗ್ನವಾದ ತನ್ನ ಪತ್ನಿಯನ್ನು ಕೆರಳಿಸಬೇಕೆಂದು ವಿನೋದವಾಡುತ್ತಾನೆ : ತನ್ನ ನಾಯಿಗೆ ಪತ್ನಿಯ ಅಣ್ಣನ ಹೆಸರು ಇಡುತ್ತಾನೆ. ಆ ಹೆಸರಿನ ಆ ನಾಯಿಯನ್ನು ಕರೆದು ಹೀಯಾಳಿಸುತ್ತಾನೆ. ಪಾಪ! ಮುಗ್ಧೆಯಾದ ಪತ್ನಿಗೆ, ತನ್ನ ಅಣ್ಣನನ್ನು ಕುರಿತೇ ಹಾಸ್ಯ ಮಾಡಿದರೆಂದು ಸಿಟ್ಟು ಬರುತ್ತದೆ. ಆದರೆ ಅದನ್ನು ವ್ಯಕ್ತಪಡಿಸಲಾರಳು, ನುಂಗಿಕೊಳ್ಳಲೂ ಸಾಧ್ಯವಾಗದೆ ಒಳವೊಳಗೆ ಪೇಚಾಡುತ್ತಾಳೆ. ಅದನ್ನು ನೋಡಿ ಪತಿಯು ವಿನೋದದಿಂದ ನಗುತ್ತಾನೆ.—ಇದು ಶ್ಯಾಲ ಶುನಕ ನ್ಯಾಯದ ಉದಾಹರಣೆ.



# ಸಂಸ್ಕೃತ ಹಿತೋಕ್ತಿಗಳು

೧. ಗುಣಾಃ ಸರ್ವತ್ರ ಪೂಜ್ಯಂತೇ ಪಿತೃವಂಶೋ ನಿರರ್ಥಕಃ ।

ಸದ್ಗುಣಗಳಿಗೆ ಎಲ್ಲೆಡೆಗಳಲ್ಲೂ ಮನ್ನಣೆ – ಮರ್ಯಾದೆಗಳುಂಟು. ಕೇವಲ ತಂದೆಯ ವಂಶದ ಹೆಗ್ಗಳಿಕೆಗೆ ಮನ್ನಣೆ ದೊರಕದು; ಮರ್ಯಾದೆ ಸಿಕ್ಕುವುದು ವೈಯಕ್ತಿಕ ಗುಣಾಢ್ಯತೆಗೆ ಮಾತ್ರ.

೨. ಚಕ್ರವತ್ ಪರಿವರ್ತಂತೇ ದುಃಖಾನಿ ಚ ಸುಖಾನಿ ಚ ।

ಸುಖ–ದುಃಖಗಳೆರಡೂ ಚಕ್ರದಂತೆ ತಿರುಗುತ್ತಿರುತ್ತವೆ. ಅಂದರೆ ಮನುಷ್ಯನ ಜೀವನದಲ್ಲಿ ಬರುವ ಸುಖ–ದುಃಖಗಳು ಶಾಶ್ವತವಲ್ಲ.

೩. ಸಂತೋಷಂ ಏವ ಪುರುಷಸ್ಯ ಪರಂ ನಿಧಾನಂ ।

ಸಂತೋಷದಿಂದಿರುವ ಸ್ವಭಾವವೇ ಮನುಷ್ಯನಿಗೆ ಶ್ರೇಷ್ಠವಾದ ಆಧಾರವಿದ್ದಂತೆ.

೪. ಉದ್ಯಮೇನ ಹಿ ಸಿದ್ಧ್ಯಂತಿ ಕಾರ್ಯಾಣಿ ನ ಮನೋರಥೈಃ ।

ಕಾರ್ಯ ಪ್ರವೃತ್ತಿಯಿಂದಲೇ ಕೆಲಸ-ಕಾರ್ಯಗಳು ಸಿದ್ಧಿಸುತ್ತವೆಯೇ ಹೊರತು ಕೇವಲ ಮನಸ್ಸಿನೊಳಗಿನ ಆಸೆಗಳಿಂದಲ್ಲ.

೫. ಅನ್ಯಾಯೋಪಾರ್ಜಿತಂ ವಿತ್ತಂ ಸಹಮೂಲಂ ವಿನಶ್ಯತಿ ।

ಅನ್ಯಾಯದಿಂದ ಸಂಪಾದಿಸಿದ ಸಂಪತ್ತು ಸಂಪೂರ್ಣವಾಗಿ-ಸಮೂಲ-ವಾಗಿ ನಾಶವಾಗುತ್ತದೆ.

೬. ನ ಚ ಧರ್ಮೋ ದಯಾಪರಃ ।

ದಯೆಗಿಂತ ಮಿಗಿಲಾದ ಧರ್ಮವು ಇನ್ನೊಂದಿಲ್ಲ.

೭. ಅವ್ಯವಸ್ಥಿತ ಚಿತ್ತಸ್ಯ ಪ್ರಸಾದೋಽಪಿ ಭಯಂಕರಃ ।

ಚಂಚಲ ಚಿತ್ತದವನು ಮಾಡುವ ಅನುಗ್ರಹವು ಕೂಡ ಅಪಾಯ-ಕಾರಿಯಾದುದು.

೮. ಸತ್ಯಾನುಸಾರಿಣೀ ಲಕ್ಷ್ಮೀಃ,
ಬುದ್ಧಿಃ ಕರ್ಮಾನುಸಾರಿಣೀ ।

ಸಿರಿ-ಸಂಪತ್ತು ಸತ್ಯವನ್ನೂ, ಬುದ್ಧಿಯು ಕರ್ಮವನ್ನೂ ಅನು-ಸರಿಸುತ್ತದೆ (ಹಿಂಬಾಲಿಸುತ್ತದೆ).

೯. ಅಧರ್ಮವಿಷವೃಕ್ಷಸ್ಯ ಪತ್ರಂತೇ ಸ್ವಾಮಿ ಕಿಂ ಫಲಂ .

ಅಧರ್ಮವೆಂಬ ವಿಷವೃಕ್ಷಕ್ಕೆ ಸವಿಯಾದ ಹಣ್ಣುಗಳು ಬಿಡಲು ಸಾಧ್ಯವೆ?

೧೦. ಅಲ್ಪವಿದ್ಯಾ ಮಹಾಗರ್ವೀ ।

ಅಲ್ಪವಿದ್ಯೆಯುಳ್ಳವನು ಮಹಾ ಗರ್ವಿಯಾಗಿರುತ್ತಾನೆ.

೧೧. ಅಪಂಥಾನಂ ತು ಗಚ್ಛಂತಂ ಸೋದರೋಽಪಿ ವಿಮುಂಚತಿ

ಅಡ್ಡದಾರಿ ಹಿಡಿದವನನ್ನು ಅವನ ಸ್ವಂತ ಸಹೋದರರು ಕೂಡ ಕೈಬಿಡುತ್ತಾರೆ.

೧೨. ಪರೋಪಕಾರಾರ್ಥಮಿದಂ ಶರೀರಂ ।

ಈ ನಮ್ಮ ಶರೀರವು ಪರೋಪಕಾರ ಮಾಡುವುದಕ್ಕಾಗಿಯೇ ಇದೆ.

೧೩. ಪ್ರತ್ಯಹಂ ಪ್ರತ್ಯವೇಕ್ಷೇತ ನರಶ್ಚರಿತಮಾತ್ಮನಃ ।

ಪ್ರತಿಯೊಬ್ಬ ಮನುಷ್ಯನೂ, ತನ್ನ ನಡೆವಳಿಕೆಯನ್ನು ಪ್ರತಿನಿತ್ಯ ವಿಮರ್ಶಾತ್ಮಕವಾಗಿ ನಿರೀಕ್ಷಿಸುತ್ತಿರಬೇಕು. (ಅಂದರೆ ತಪ್ಪುತಡೆಗಳೂ, ಪಾಪಕಾರ್ಯಗಳೂ ಘಟಿಸುವುದಿಲ್ಲ.)

೧೪. ವೃತ್ತೇನ ಹಿ ಭವತ್ಯಾರ್ಯೋ, ನ ಧನೇನ-ನ ವಿದ್ಯಯಾ

ಯಾವನೊಬ್ಬನು ತನ್ನ ನಡೆತೆಯಿಂದಲೇ ಸುಸಂಸ್ಕೃತ (ಆರ್ಯ) ನೆನಿಸುತ್ತಾನೆಯೇ ಹೊರತು ತನ್ನಲ್ಲಿರುವ ಧನ ಅಥವಾ ವಿದ್ಯೆಯಿಂದಲ್ಲ.

೧೫. ಸರ್ವಂ ಪರವಶಂ ದುಃಖಂ, ಸರ್ವಮಾತ್ಮವಶಂ
ಸುಖಂ |

ಪರಾಧೀನವಾಗಿರುವುದೆಲ್ಲವೂ ದುಃಖಕರವಾಗಿದೆ, ಸ್ವಾಧೀನವಾಗಿರುವುದೆಲ್ಲ ಸುಖಕರವಾಗಿವೆ.

೧೬. ಸಂತಃ ಸ್ವಯಂ ಪರಹಿತೇ ವಿಹಿತಾಭಿಯೋಗಾಃ |

ಸಜ್ಜನರು ಪರರ ಕಲ್ಯಾಣಕ್ಕಾಗಿ ಚಿಂತಿಸುತ್ತ ಅವರಿಗೆ ಸಹಾಯ ಸಲ್ಲಿಸುತ್ತಿರುತ್ತಾರೆ.

೧೭. ಸ್ವಭಾವಂ ನೈವ ಮುಂಚಂತಿ ಸಂತಃ ಸಂಸರ್ಗತೋ
ಸತಾಂ |

ಅಪ್ಪಟ ಸಜ್ಜನರು, ದುಷ್ಟರ ಸಹವಾಸದಲ್ಲಿದ್ದರೂ ಕೂಡ, ತಮ್ಮ ಸದ್ಗುಣಗಳನ್ನು ಕಳೆದುಕೊಳ್ಳುವುದಿಲ್ಲ.

೧೮. ಜೀವನಾಶಾ ಧನಾಶಾ ಚ ಜೀರ್ಯತೋಽಪಿ
ನ ಜೀರ್ಯಂತಿ |

ಮನುಷ್ಯನ ಬದುಕುವ ಆಸೆ ಹಾಗು ಧನದ ಆಸೆಗಳು ತಾನು ಸ್ವತಃ ಕ್ಷೀಣಿಸಿದರೂ ಕ್ಷೀಣವಾಗುವುದಿಲ್ಲ.

೧೯. ಧರ್ಮೇಣ ಹಿ ಸಹಾಯೇನ ತಮಸ್ತರತಿ ದುಸ್ತರಂ ।

ಧರ್ಮದ ಸಹಾಯದಿಂದಲೇ ಮಾನವನು ಈ ಲೋಕದ ಕತ್ತಲೆಯನ್ನು ದಾಟಿ ಪಾರಾಗುತ್ತಾನೆ.

೨೦. ಮಾ ಗೃಧಃ ಕಸ್ಯ ಸ್ವಿದ್ಧನಂ ।

ಪರಧನಕ್ಕಾಗಿ ಆಶಿಸದಿರು.

೨೧. ಅಣೋರಣೀಯಾನ್ ಮಹತೋ ಮಹೀಯಾನ್ ।

ಆತ್ಮವು ಅಣುವಿಗಿಂತ ಅಣುವಾಗಿಯೂ, ಮಹತ್ತಿಗಿಂತ ಮಹತ್ತಾಗಿಯೂ ಇರುವುದು.

೨೨. ನ ವಿತ್ತೇನ ತರ್ಪಣೀಯೋ ಮನುಷ್ಯೋ ।

ಮನುಷ್ಯನು (ಕೇವಲ) ಧನದಿಂದ ಸಂತುಷ್ಟನಾಗುವುದಿಲ್ಲ.

೨೩. ಸತ್ಯಮೇವ ಜಯತೇ, ನಾನೃತಂ.

ಕೇವಲ ಸತ್ಯಕ್ಕೆ ಮಾತ್ರ ಜಯವು ಲಭಿಸುತ್ತದೆ—ಸುಳ್ಳಿಗಲ್ಲ.

೨೪. ತಾಂ ಯೋಗಮಿತಿ ಮನ್ಯಂತೇ ಸ್ಥಿರಾಮಿಂದ್ರಿಯ ಧಾರಣಾಂ ।

ಇಂದ್ರಿಯಗಳನ್ನು ಸ್ಥಿರವಾಗಿ ವಶದಲ್ಲಿಟ್ಟುಕೊಳ್ಳುವುದೇ ಯೋಗವಾಗಿದೆ.

೨೫. ಜಾತಸ್ಯ ಹಿ ಧ್ರುವೋ ಮೃತ್ಯುಃ ।

ಹುಟ್ಟಿದವನಿಗೆ ಸಾವು ತಪ್ಪದು.

೨೬. ವಿದ್ಯಾಧನಂ ಸರ್ವಧನ ಪ್ರಧಾನಂ ।

ಎಲ್ಲ ಧನಕ್ಕಿಂತ ವಿದ್ಯಾಧನವೇ ಮಿಗಿಲಾದುದು.

೨೭. ಅಶಾಂತಸ್ಯ ಕುತಸ್ಸುಖಂ ।

ಶಾಂತಿಯಿಲ್ಲದವನಿಗೆ ಸುಖವೆಲ್ಲಿಯದು ?

೨೮. ಭವಂತಿ ಕ್ಲೇಶಬಹುಲಾಃ ಸರ್ವಸ್ಯಾಪೀಹ ಸಿದ್ಧಯಃ ।

ಎಲ್ಲರಿಗೂ ಕಾರ್ಯಸಿದ್ಧಿ ಲಭ್ಯವಾಗುವುದು ಪ್ರಯಾಸದಿಂದಲೇ.

೨೯. ಮತಿರೇವ ಬಲಾದ್ ಗರೀಯಸೀ ।

ಶಕ್ತಿಗಿಂತ ಬುದ್ಧಿ (ಯುಕ್ತಿ) ಮೇಲು.

೩೦. ವಿದೇಶೇ ಬಂಧುಲಾಭೋ ಹಿ ಮರಾವಮೃತ ಸಿಂಚನಂ ।

ಪರದೇಶದಲ್ಲಿ ಬಂಧುವೊಬ್ಬನು ಸಿಕ್ಕಿದರೆ, ಮರಭೂಮಿಯಲ್ಲಿ ಅಮೃತದ ತೊರೆ ದೊರೆತಷ್ಟು ಸಂತೋಷವಾಗುವುದು.

೩೧. ವರಂ ಹಿ ಮಾನಿನೋ ಮೃತ್ಯುಃ,
ನ ದೈನ್ಯಂ ಸ್ವಜನಾಗ್ರತಃ ।

ಸ್ವಜನರನ್ನು ದೈನ್ಯದಿಂದ ಬೇಡುವುದಕ್ಕಿಂತ, ಸ್ವಾಭಿಮಾನಿಯಾದವನಿಗೆ ಮರಣವೇ ಲೇಸೆನಿಸುವುದು.

೩೨. ಗುಣತಃ ಸಂಗ್ರಹಂ ಕುರ್ಯಾದ್ದೋಷಸ್ತು
ವಿಸರ್ಜಯೇತ್ ।

ದೋಷಗಳನ್ನು ಎಣಿಸದೆ (ಬಿಟ್ಟು) ಗುಣಗಳನ್ನು ಮಾತ್ರ ಸಂಗ್ರಹಿಸಬೇಕು.

೩೩. ವಿಚಿತ್ರರೂಪಾಃ ಖಲು ಚಿತ್ತವೃತ್ತಯಃ ।

ಪ್ರತಿಯೊಬ್ಬನ ಮನೋವೃತ್ತಿಯು ಒಂದೊಂದು ತೆರನಾಗಿರುತ್ತದೆ.

೩೪. ಉದ್ಯಮೇನ ಹಿ ಸಿದ್ಧ್ಯಂತಿ ಕಾರ್ಯಾಣಿ
ನ ಮನೋರಥೈಃ ।

ನಾವು ಕಾರ್ಯ ಪ್ರವೃತ್ತರಾಗಿ ಮುಂದುವರಿದರೆ ಮಾತ್ರ ಯಶಸ್ಸು ದೊರೆಯುವುದೇ ಹೊರತು, ಬರಿ ಆಶೆ-ಆಕಾಂಕ್ಷೆಗಳನ್ನಿಟ್ಟುಕೊಂಡರೆ ಫಲವು ದೊರಕದು.

೩೫. ಸಂತೋಷ ಏವ ಪುರುಷಸ್ಯ ಪರಂ ನಿಧಾನಂ ।

ಸಂತೋಷವೇ ಮನುಷ್ಯನಿಗೆ ಮಹತ್ವದ ಆಧಾರವಾಗಿದೆ.

೩೬. ಚಕ್ರವತ್ ಪರಿವರ್ತಂತೇ ದುಃಖಾನಿ ಚ
ಸುಖಾನಿ ಚ ।

ಸುಖ-ದುಃಖಗಳು ಗಾಲಿಯಂತೆ ತಿರುಗುತ್ತಿರುತ್ತವೆ. ಅಂತೆಯೇ ಒಮ್ಮೆ ದುಃಖ ಬಂದರೆ, ಇನ್ನೊಮ್ಮೆ ಸುಖವು ಬರುತ್ತದೆ.

೩೭. ಗುಣೈರ್ಗೌರವಮಾಯಾತಿ ಮಹತಾ ನ ಧನೇನ ಹಿ ।

ಸದ್ಗುಣಗಳಿಗೆ ಅಪಾರ ಮನ್ನಣೆಯುಂಟೇ ಹೊರತು, ಅಪಾರ ಸಂಪತ್ತಿಗೆ ಇಲ್ಲ.

೩೮. ನಿರಪೇಕ್ಷೋ ನ ಕರ್ತವ್ಯೋ ಭೃತ್ಯೈಃ ಸ್ವಾಮೀ
ಕದಾಚನ ।

ಒಡೆಯನಿಗೆ ತಮ್ಮ ಆವಶ್ಯಕತೆ ಇಲ್ಲವೆಂದಾಗುವಂತೆ ಸೇವಕರು ನಡೆದು-ಕೊಳ್ಳಬಾರದು.

೩೯. ಅಜಾಪುತ್ರಂ ಬಲಿಂ ದದ್ಯಾತ್, ದೇವೋ
ದುರ್ಬಲ ಘಾತಕಃ ।

ಯಜ್ಞಬಲಿಗೆ ಆಡಿನ ಮರಿಯೇ ತುತ್ತಾಯಿತು. ಕಾರಣ, ದೇವರೂ ಕೂಡ ದುರ್ಬಲರನ್ನೇ ಕೊಲ್ಲುವನೋ ಏನೋ !

೪೦. ಶಾಸ್ತ್ರಪೂತಂ ವದೇದ್ವಾಕ್ಯಂ, ಮನಃಪೂತಂ ಸಮಾಚರೇತ್ ।

ಮಾತುಗಳನ್ನು ಶಾಸ್ತ್ರಬದ್ಧವಾಗಿಯೇ ಆಡಬೇಕು; ಯಾವ ಕೆಲಸವಾದರೂ ಶುದ್ಧ ಮನಸ್ಸಿನಿಂದಲೇ ಎಸಗಬೇಕು.

೪೧. ಯಾದೃಶೀಂ ಭಾವನಾಂ ಕುರ್ಯಾತ್ ಶುದ್ಧಿರ್ಭವತಿ ತಾದೃಶೀ ।

ನಮ್ಮ ವಿಶ್ವಾಸಕ್ಕೆ ತಕ್ಕಂತೆ ಫಲವು ದೊರೆಯವುದು.

೪೨. ವಾದೇ ವಾದೇ ಜಾಯತೇ ತತ್ತ್ವಬೋಧಃ ।

ತಾತ್ತ್ವಿಕ ಚರ್ಚೆಯನ್ನು ಮಾಡುತ್ತಿದ್ದರೆ ತತ್ತ್ವದ ತಿರುಳು ಸ್ಫುಟವಾಗಿ ತಿಳಿಯುವುದು.

೪೩. ನಾಸಮೀಕ್ಷ್ಯ ಪರಂ ಸ್ಥಾನಂ ಪೂರ್ವಮಾಯತನಂ ತ್ಯಜೇತ್ ।

ಹೊಸ ಸ್ಥಳ ಅಥವಾ ಸ್ಥಾನವನ್ನು ಪರೀಕ್ಷಿಸದೆ ಮುಂಚಿನದನ್ನು ಬಿಟ್ಟುಕೊಡತಕ್ಕದ್ದಲ್ಲ. (ಹೋ.: ಗೋಡೆ ಕಟ್ಟಿ ತಟ್ಟಿ ಒದೆಯಬೇಕು)

೪೪. ಅಪರೀಕ್ಷ್ಯ ನ ಕರ್ತವ್ಯಂ, ಕರ್ತವ್ಯಂ ಸುಪರೀಕ್ಷಿತಂ ।

ಪರೀಕ್ಷಿಸದೆ ಯಾವ ಕಾರ್ಯಕ್ಕೂ ತೊಡಗಬಾರದು. ಚೆನ್ನಾಗಿ ಪರೀಕ್ಷಿಸಿಯೇ ಕಾರ್ಯಾರಂಭ ಮಾಡಬೇಕು.

೪೫. ಆತ್ಮನಃ ಕರ್ಮದೋಷಾಂಸ್ತು ನೈವ ಜಾನಾತ್ಯ-
ಪಂಡಿತಃ ।

ಮೂರ್ಖನು ತನ್ನ ಸ್ವಂತದ ಕರ್ಮದೋಷಗಳನ್ನು ಅರಿತುಕೊಳ್ಳು-ವುದಿಲ್ಲ.

೪೬. ಅರಕ್ಷಿತಂ ತಿಷ್ಠತಿ ದೈವರಕ್ಷಿತಂ,
ಸುರಕ್ಷಿತಂ ದೈವಹತಂ ವಿನಶ್ಯತಿ ।

ರಕ್ಷಣೆಯಿಲ್ಲದವನೂ ಕೂಡ ದೈವಬಲವಿದ್ದರೆ ರಕ್ಷಿಸಲ್ಪಡುವನು; ಅಂತೆಯೇ ದುರ್ದೈವಿಯಾದವನಿಗೆ ಎಷ್ಟೊಂದು ರಕ್ಷಣೆಯಿದ್ದರೂ ಆತನು ನಾಶ-ಹೊಂದಬಹುದು.

೪೭. ಯೋ ಯದ್ವಪತಿ ಬೀಜಂ ಹಿ ಲಭತೇ ಸೋಽಪಿ
ತತ್ಫಲಂ ।

ಬಿತ್ತಿದ್ದನ್ನು ಬೆಳೆದುಕೋ— ಅಥವಾ ಬೀಜದಂತೆ ಫಲ.

೪೮. ಸಂದೀಪ್ತೇ ಭವನೇ ತು ಕೂಪ ಖನನಂ
ಪ್ರತ್ಯುದ್ಯಮಃ ಕೀದೃಶಃ ।

ಮನೆಯು ಉರಿಯುತ್ತಿದ್ದಾಗ ಬಾವಿ ತೋಡುವ ಉದ್ಯೋಗಕ್ಕೆ ಏನೆನ್ನಬೇಕು?

೪೯. ಸಿದ್ಧ್ಯಂತಿ ಕುತ್ರ ಸುಕೃತಾನಿ ವಿನಾ ಶ್ರಮೇಣ ।

ಶ್ರಮವಿಲ್ಲದೆ ಸತ್ಕಾರ್ಯವು ಸಿದ್ಧಿಸುವುದೇ ?

೫೦. ನ ಜ್ಞಾನಾತ್ ಪರಂ ಚಕ್ಷುಃ ।

ಜ್ಞಾನಕ್ಕಿಂತ ಹೆಚ್ಚಿನ ನೇತ್ರಗಳಿಲ್ಲ.

೫೧. ನ ಸಾ ಸಭಾ ಯತ್ರ ನ ಸನ್ತಿ ವೃದ್ಧಾಃ ।

ಹಿರಿಯರಿಲ್ಲದ ಸಭೆ ಸಭೆಯೇ ಅಲ್ಲ.

೫೨. ಕಾಲೇನ ಫಲತೇ ತೀರ್ಥಂ,
ಸದ್ಯಃ ಸಾಧುಸಮಾಗಮಃ ।

ತೀರ್ಥಯಾತ್ರೆಯ ಫಲವು ಕಾಲಾಂತರದಲ್ಲಿ ಲಭ್ಯವಾದರೆ, ಸಜ್ಜನರ ಸಂಗದ ಫಲವು ತತ್ಕಾಲವೇ ಲಭಿಸುತ್ತದೆ.

೫೩. ತ್ಯಾಗಾತ್ ಜಗತಿ ಪೂಜ್ಯಂತೇ
ಪಶುಪಾಷಾಣಪಾದಪಾಃ ।

ತ್ಯಾಗದಿಂದಾಗಿಯೇ ಪ್ರಾಣಿ, ಶಿಲೆ ಹಾಗು ವೃಕ್ಷಗಳು ಪೂಜನೀಯ

ವಾಗಿರುತ್ತವೆ. (ಕಾಮಧೇನು, ಚಿಂತಾಮಣಿ ಹಾಗು ಕಲ್ಪವೃಕ್ಷ—ಇತ್ಯಾದಿಗಳು)

೩೪. ಸಂತಶ್ಚಾರಿತ್ರಭೂಷಣಾಃ ।

ಸಜ್ಜನರಿಗೆ ಶೀಲವೇ ಭೂಷಣವಾಗಿದೆ.

೩೫. ಅತಿಭಕ್ತಿರತೀವೋಕ್ತಿಃ ಸದ್ಯಃ ಪ್ರಾಣಾಪಹಾರಿಣೀ ।

ಅತಿ ಭೋಜನ ಹಾಗು ಅತಿ ಮಾತು ತತ್ಕಾಲ ಪ್ರಾಣಹೀರುತ್ತದೆ.

೩೬. ಮನಸಿ ಚ ಪರಿತುಷ್ಟೇ ಕೋಽರ್ಥವಾನ್ ಕೋ
ದರಿದ್ರಃ ।

ಮನಸ್ಸಿನ ತೃಪ್ತಿಯೊಂದಿದ್ದರೆ ಬಡತನ-ಶ್ರೀಮಂತಿಕೆಗಳ ಪ್ರಶ್ನೆಯೇ ಉದ್ಭವಿಸುವುದಿಲ್ಲ.

೩೭. ಯಂ ಯಂ ಪಶ್ಯಸಿ ತಸ್ಯ ತಸ್ಯ ಪುರತೋ
ಮಾ ಬ್ರೂಹಿ ದೀನಂ ವಚಃ ।

ಕಂಡ ಕಂಡವರೆದುರಿನಲ್ಲಿ ದೀನವಚನಗಳನ್ನಾಡಬೇಡ.

೩೮. ದಯಾ ಸರ್ವಸುಖೈಷಿತ್ವಂ ।

ಎಲ್ಲರಿಗೂ ಕ್ಷೇಮ (ಸುಖ) ವನ್ನು ಬಯಸುವುದೇ ದಯೆಯಾಗಿದೆ.

೫೯. ಸತ್ಯಾನುಸಾರಿಣೀ ಲಕ್ಷ್ಮೀಃ
ಬುದ್ಧಿಃ ಕರ್ಮಾನುಸಾರಿಣೀ ।

ಸಂಪತ್ತು ಸತ್ಯವನ್ನೂ, ಬುದ್ಧಿಯು ಕರ್ಮವನ್ನೂ ಹಿಂಬಾಲಿಸುತ್ತದೆ.

೬೦. ಸಜ್ಜನೈಃ ಸಂಗತಂ ಕುರ್ಯಾತ್ ಧರ್ಮಾಯ ಚ
ಸುಖಾಯ ಚ ।

ಧರ್ಮ ಹಾಗೂ ಸುಖ ಸಂಪಾದನೆಗಾಗಿ ಸಜ್ಜನರ ಸಹವಾಸವನ್ನು ಬೆಳೆಸಿಕೊಳ್ಳಬೇಕು.

೬೧. ಲೋಭಃ ಪಾಪಸ್ಯ ಕಾರಣಂ ।

ಆಸೆಯೇ ಪಾಪಕಾರ್ಯಗಳಿಗೆ ಮೂಲವಾಗಿದೆ.

೬೨. ಉದಾರಸ್ಯ ತೃಣಂ ವಿತ್ತಂ,
ನಿಸ್ಪೃಹಸ್ಯ ತೃಣಂ ಜಗತ್ ।

ಉದಾರಿಗೆ ಹಣವು ಹುಲ್ಲುಕಡ್ಡಿಗೆ ಸಮಾನ, ನಿಸ್ಪೃಹನಿಗೆ (ಆಶೆಯಿಲ್ಲದವನಿಗೆ) ಜಗತ್ತು ತೃಣಸಮಾನ.

೬೩. ಗೌರವಂ ಪ್ರಾಪ್ಯತೇ ದಾನಾನ್ನ ತು ವಿತ್ತಸ್ಯ
ಸಂಚಯಾತ್ ।

ದಾನ ಮಾಡಿದರೆ ಮರ್ಯಾದೆ ದೊರೆಯುವದೇ ಹೊರತು, ವಿತ್ತ-ಸಂಚಯದಿಂದಲ್ಲ.

೬೪. ನ ಹಿ ವಂಧ್ಯಾ ವಿಜಾನಾತಿ,
ಗುರ್ವೀ ಪ್ರಸವವೇದನಾಂ ।

ಬಂಜೆಯಾದವಳಿಗೆ ಪ್ರಸೂತಿಯ ಕಷ್ಟ ಹೇಗೆ ತಿಳಿದೀತು? (ಹಸಿ-ದವನೇ ಬಲ್ಲ, ಹಸಿವೆಯ ಶೂಲಿ—ಎಂಬ ಕನ್ನಡ ಗಾದೆಗೆ ಸಮಾನ.)

೬೫. ಆಪದಿ ಸ್ಫುರತಿ ಪ್ರಜ್ಞಾ ಯಸ್ಯ ಧೀರಃ ಸ ಏವ ಹಿ ।

ಆಪತ್ಕಾಲ ಬಂದೊದಗಿದಾಗ ಯಾರ ಬುದ್ಧಿಯು ಓಡುವುದೋ ಅವನೇ ನಿಜವಾಗಿ ಧೀರನಾಗಿದ್ದಾನೆ.

೬೬. ಅಪ್ರಕಟೀಕೃತ ಶಕ್ತಿಃ ಶಕ್ತೋಽಪಿ
ಜನಸ್ತಿರಸ್ಕ್ರಿಯಾಂ ಲಭತೇ ।

ಶಕ್ತಿವಂತನಿದ್ದೂ ತನ್ನ ಶಕ್ತಿಯನ್ನು ಪ್ರಕಟಗೊಳಿಸದಿದ್ದರೆ ಜನರಿಂದ ಆತ ತಿರಸ್ಕರಿಸಲ್ಪಡುತ್ತಾನೆ.

೬೭. ಆತ್ಮೈವ ಹ್ಯಾತ್ಮನಃ ಸಾಕ್ಷೀ ಕೃತಸ್ಯಾಪಕೃತಸ್ಯ ಚ ।

ತಾನು ಮಾಡಿದ ಒಳ್ಳೆಯ ಅಥವಾ ಕೆಟ್ಟ ಕೆಲಸಗಳಿಗೆ ತನ್ನ ಆತ್ಮವೇ ಸಾಕ್ಷಿಯಾಗಿರುತ್ತದೆ.

೬೮. ಅಲ್ಪಾಕ್ಷರ ರಮಣೀಯಂ ಯಃ ಕಥಯತಿ ಸ ಖಲು ವಾಗ್ಮೀ ।

ಸ್ವಲ್ಪದರಲ್ಲೇ ಸ್ವಾರಸ್ಯವಾಗಿ ಸುಂದರವಾಗಿ ಹೇಳಬಲ್ಲವನೇ ನಿಜವಾದ ವಾಗ್ಮಿ,—ಮಾತುಗಾರ.

೬೯. ಯತೋ ಧರ್ಮಸ್ತತೋ ಜಯಃ ।

ಧರ್ಮವಿದ್ದಲ್ಲಿ ಜಯ ಇದ್ದೇ ಇದೆ.

೭೦. ಧರ್ಮೇಣ ಹೀನಾಃ ಪಶುಭಿಃ ಸಮಾನಾಃ ।

ಧರ್ಮಹೀನರು ಪಶುಸಮಾನರಾಗಿದ್ದಾರೆ.

೭೧. ದೈವಮೇವ ಹಿ ಸಾಹಾಯ್ಯಂ ಕುರುತೇ ಸತ್ತ್ವಶಾಲಿನಾಂ ।

ಸತ್ತ್ವಶಾಲಿಗಳಾದವರಿಗೆ ದೈವವು ತಾನಾಗಿಯೇ ಸಹಾಯಸಲ್ಲಿಸುವುದು.

೭೨. ಸಾನುಕೂಲೇ ಜಗನ್ನಾಥೇ ವಿಪ್ರಿಯಃ ಸುಪ್ರಿಯೋ ಭವೇತ್ ।

ಜಗನ್ನಿಯಾಮಕನಾದ ದೇವಾಧಿದೇವನು ನಮಗೊಲಿದರೆ ವಿಷವೂ ಅಮೃತವಾಗಬಹುದು.

೭೩. ಮಾತಾ ಸಮಂ ನಾಸ್ತಿ ಶರೀರ ಪೋಷಣಂ ।

ನಮ್ಮ ದೇಹಪೋಷಣೆಗೆ ತಾಯಿಗೆ ಸಮಾನರಾದವರು ಯಾರೂ ಇಲ್ಲ.

೭೪. ಯೋ ಯದ್ವಪತಿ ಬೀಜಂ ಹಿ ಲಭತೇ ಸೋ ಪಿ ತತ್ಫಲಂ ।

ಮನುಷ್ಯನು ತಾನು ಬಿತ್ತಿದ್ದನ್ನೇ ಬೆಳೆದುಕೊಳ್ಳುತ್ತಾನೆ. ಫಲವು ಕರ್ಮಾನುಸಾರಿಯಾಗಿದೆ.

೭೫. ಭವಿತವ್ಯಾನಾಂ ದ್ವಾರಾಣಿ ಭವಂತಿ ಸರ್ವತ್ರ ।

ವಿಧಿನಿಯಾಮಕವು (ಹಣೆಯ ಬರಹವು) ನೆರವೇರಲು ಅದಕ್ಕೆ ದಾರಿಗಳು ಹಲವು. ಅಂದರೆ ಹಣೆಯ ಬರಹವನ್ನು ತಪ್ಪಿಸಲು ಸಾಧ್ಯವಿಲ್ಲ.

೭೬. ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್,
ನ ಬ್ರೂಯಾತ್ ಸತ್ಯಮಪ್ರಿಯಂ ।

ಸತ್ಯವಾದುದನ್ನು ಪ್ರಿಯವೆನಿಸುವಂತೆ ಮಾತನಾಡಬೇಕು. ಸತ್ಯವಿದ್ದರೂ ಅಪ್ರಿಯವಾಗಿ ಮಾತ್ರ ಆಡಬಾರದು.

೭೭. ಕೃತೇ ಚ ಪ್ರತಿಕರ್ತವ್ಯಮೇಷ ಧರ್ಮಃ ಸನಾತನಃ ।

ಉಪಕಾರಕ್ಕೆ ಪ್ರತ್ಯುಪಕಾರ ಮಾಡುವುದೇ ಸನಾತನಧರ್ಮವಾಗಿದೆ.

೭೮. ಮನೋ ಹಿ ಹೇತುಃ ಸರ್ವೇಷಾಂ ಇಂದ್ರಿಯಾಂಣಾ
ಪ್ರವರ್ತತೇ ।

ಎಲ್ಲ ಇಂದ್ರಿಯಗಳ ಪ್ರವೃತ್ತಿಗೂ ಮನಸ್ಸೇ ಕಾರಣ.

೭೯. ಯೋಗಃ ಕರ್ಮಸು ಕೌಶಲಮ್ ।

ಕರ್ಮ (ಕೆಲಸ)ದಲ್ಲಿ ತೋರುವ ಕೌಶಲ್ಯವೇ 'ಯೋಗ'ವಾಗಿದೆ.

೮೦. ಆಚಾರಃ ಪ್ರಥಮೋ ಧರ್ಮಃ ।

ಆಚಾರವೇ (ಸದಾಚಾರ) ಧರ್ಮದ ಪ್ರಥಮ ಮೆಟ್ಟಿಲಾಗಿದೆ.

೮೧. ಮೌನಿನಃ ಕಲಹೋ ನಾಸ್ತಿ, ನ ಭಯಂ ಚಾಸ್ತಿ
ಜಾಗೃತಃ ।

ಮೌನವಾಗಿರುವವನಿಗೆ ಕಲಹವಿಲ್ಲ; ಎಚ್ಚರುಳ್ಳವನಿಗೆ ಭಯವೆಂಬುದಿಲ್ಲ.

೮೨. ಗತೇಽಪಿ ವಯಸಿ ಗ್ರಾಹ್ಯಾ ವಿದ್ಯಾ ಸರ್ವಾತ್ಮನಾ
ಬುಧೈಃ ।

ವಯಸ್ಸಾಗಿದ್ದರೂ ಬುದ್ಧಿವಂತರು ವಿದ್ಯೆಯನ್ನು ಗ್ರಹಿಸಿಕೊಳ್ಳಬೇಕು—ಗಳಿಸಿಕೊಳ್ಳಬೇಕು.

೮೩. ಶಾಸ್ತ್ರಾತ್ ರೂಢಿರ್ಬಲೀಯಸೀ ।

ಲಿಖಿತ ಶಾಸ್ತ್ರಾಚರಣೆಗಿಂತ ರೂಢಿಯಿಂದ ನಡೆದು ಬಂದ ಆಚ-ರಣೆಯೇ ಬಲಿಷ್ಠವಾಗಿದೆ.

೮೪. ಪ್ರಿಯವಾಕ್ಯಪ್ರದಾನೇನ ಸರ್ವೇ ತುಷ್ಯಂತಿ ಜಂತವಃ ।

ತನಗೆ ಪ್ರಿಯವಾದ ಒಳ್ಳೆಯ ಮಾತನ್ನಾಡಿದರೆ ಎಲ್ಲ ಪ್ರಾಣಿಗಳೂ (ಮನುಷ್ಯನೂ) ಹರುಷಗೊಳ್ಳುತ್ತವೆ.

೮೫. ವಿವಾಹಶ್ಚ ವಿವಾದಶ್ಚ ಸಮಯೋರೇವ ಶೋಭತೇ ।

ವಿವಾಹವಾಗಲಿ, ವಾದವಿವಾದವಾಗಲಿ (ಚರ್ಚೆ) ಸಮಾನಸ್ಕಂಧರಲ್ಲಿ ಮಾತ್ರವೇ ಶೋಭಿಸುವುದು.

೮೬. ಕ್ರೋಧವಂತಂ ಮದೋನ್ಮತ್ತಂ ನಮಸ್ಕಾರೇಽಪಿ ವರ್ಜಯೇತ್ ।

ಸಿಟ್ಟಿನಲ್ಲಿದ್ದವನನ್ನೂ, ಸೊಕ್ಕಿನಿಂದ ಉನ್ಮತ್ತನಾದವನನ್ನೂ ನಮಸ್ಕರಿಸಲೂ ಬಾರದು. (ತಡವಬಾರದು, ಮಾತನಾಡಲೂ ಬಾರದು)

೮೭. ಪರೋಪಕರಣಾರ್ಥಾಯ ವಚನೇ ಕಿಂ ದರಿದ್ರತಾ ।

ನಮ್ಮ ಬರಿ ಮಾತಿನಿಂದ ( ಹೇಳುವುದು — ಹೇಳಿಸುವುದು—ಇ. )

ಇನ್ನೊಬ್ಬರಿಗೆ ಉಪಕಾರವಾಗುವಂತಿದ್ದರೆ ಸುಲಭವಾಗಿ ಮಾಡಿಬಿಡಬಹುದಲ್ಲ! ಮಾತಿಗೇಕೆ ಬಡತನ?

೮೮. ತಕ್ರಂ ಶಕ್ರಸ್ಯ ದುರ್ಲಭಂ ।

ಮಜ್ಜಿಗೆಯು ಇಂದ್ರನಿಗೆ ಕೂಡ ದೊರೆಯುವುದು ದುರ್ಲಭವಾಗಿದೆ. (ಮಜ್ಜಿಗೆಯ ಮಾಹಾತ್ಮ್ಯ ಹೇಳಿರುವರು)

೮೯. ಭಾರ್ಯಾಹೀನಗೃಹಸ್ಥಸ್ಯ ಶೂನ್ಯಮೇವ ಗೃಹಂ
ಮತಂ ।

ಹೆಂಡತಿಯೊಬ್ಬಳಿಲ್ಲದಿದ್ದರೆ, ಮನೆಯು ತುಂಬಿಕೊಂಡಿದ್ದರೂ, ಅಂಥ ಗೃಹಸ್ಥನಿಗೆ ಮನೆಯು ಶೂನ್ಯವೆನಿಸುವುದು.

೯೦. ಲುಬ್ಧಾನಾಂ ಯಾಚಕಃ ಶತ್ರುಃ,
ಮೂರ್ಖಾಣಾಂ ಬೋಧಕೋ ರಿಪುಃ ।

ದುರಾಸೆಯುಳ್ಳವನಿಗೆ ಅವನ ಹತ್ತಿರ ಬಂದ ಯಾಚಕರೇ ಶತ್ರುಗಳಿದ್ದಂತೆ, ಮೂರ್ಖಜನರಿಗೆ— ಹಿತದ ನಾಲ್ಕು ಮಾತನಾಡುವ ಉಪದೇಶಕರೇ ಶತ್ರುಗಳಿದ್ದಂತೆ.

೯೧. ಪರೋಪದೇಶವೇಲಾಯಾಂ ಶಿಷ್ಟಾಃ
ಸರ್ವೇ ಭವಂತಿ ವೈ ।

ಪರರಿಗೆ ಉಪದೇಶಕೊಡುವ ಸಂದರ್ಭಗಳಲ್ಲಿ ಎಲ್ಲರೂ ಬುದ್ಧಿಶಾಲಿ-

ಗಳೇ ! (ತಮ್ಮ ವಿಷಯದಲ್ಲಿ ಮಾತ್ರ ಅವರು ಬುದ್ಧಿಹೀನರು.)

೯೨. ಉಪಭೋಕ್ತುಂ ನ ಜಾನಾತಿ ಶ್ರಿಯಂ
ಪ್ರಾಪ್ಯಾಪಿ ಮಾನವಃ ।

ಸಂಪತ್ತು ಇದ್ದರೂ ಹಲವರಿಗೆ ಅದನ್ನು ಉಪಭೋಗಿಸುವುದು ಗೊತ್ತಿರುವುದಿಲ್ಲ.

೯೩. ಆರ್ತಾ ದೇವಾನ್ನಮಸ್ಯಂತಿ,
ವೃದ್ಧಾ ನಾರೀ ಪತಿವ್ರತಾ ।

ದುಃಖಿತರು ದೇವರನ್ನು ನಮಿಸುವುದು, ಸ್ತ್ರೀಯು ವೃದ್ಧಳಾದ ಮೇಲೆ (ಯೌವನ ಕಳೆದ ಮೇಲೆ) ಪತಿವ್ರತೆಯಾಗುವುದು— ಇವು ಶ್ರೇಯಸ್ಕರ ಲಕ್ಷಣಗಳಲ್ಲ.

೯೪. ಏಕಸ್ಯ ಕರ್ಮ ಸಂವೀಕ್ಷ್ಯ ಕರೋತ್ಯನ್ಯೋಽಪಿ
ಗರ್ಹಿತಂ ।

ಒಬ್ಬನ ಕೆಲಸವನ್ನು ನೋಡಿ ಇನ್ನೊಬ್ಬನೂ ಅದರಂತೆ ಮಾಡಿ ತಪ್ಪುಮಾಡುವನು. ಇದು ಅಂಧಾನುಕರಣದಿಂದಾಗುವ ಅನಾಹುತ.

೯೫. ಯಾವಜ್ಜೀವಂ ಸುಖಂ ಜೀವೇತ್ ಋಣಂ ಕೃತ್ವಾ
ಘೃತಂ ಪಿಬೇತ್ ।

ಜೀವಿಸಿರುವವರೆಗೂ ಸುಖವಾಗಿ ಜೀವಿಸಬೇಕು. ಸಾಲವಾದರೂ ಚಿಂತೆಯಿಲ್ಲ, ಸಮೀಚೀನ ಸುಖವನ್ನು ಸವಿಯಬೇಕು.

೯೬. ಜ್ಞಾನಾಂಕುಶಸಮಾ ಬುದ್ಧಿಸ್ತಸ್ಯ ನಿಶ್ಚಲತೇ ಮನಃ ।

ಜ್ಞಾನದ ಅಂಕುಶವೊಂದಿದ್ದರೆ ಹರಿದಾಡುವ ಮನಸ್ಸನ್ನು ಕೂಡ ಸ್ಥಿರವಾಗಿ ಇಟ್ಟುಕೊಳ್ಳಬಹುದು.

೯೭. ದೋಷೋಽಪಿ ಗುಣತಾಂ ಯಾತಿ,
ಪ್ರಭೋರ್ಭವತಿ ಚೇತ್‌ಕೃಪಾ ।

ಪ್ರಭುವಿನ ದಯವೊಂದಿದ್ದರೆ, ಪ್ರಾಣಿಗಳಲ್ಲಿರುವದೋಷವು ಕೂಡ ಗುಣವಾಗಿ ಪರಿಣಮಿಸುವುದು.

೯೮. ಯಃ ಕ್ರಿಯಾವಾನ್ ಸ ಪಂಡಿತಃ ।

ಕ್ರಿಯಾಶೀಲನಾಗಿರುವವನು ಮಾತ್ರ ಪಂಡಿತನೆನಿಸಿಕೊಳ್ಳುತ್ತಾನೆ.

೯೯. ಗತೇ ಶೋಕೇ ನ ಕರ್ತವ್ಯೋ ಭವಿಷ್ಯಂ
ನೈವ ಚಿಂತಯೇತ್ ।

ಆಗಿ ಹೋದುದರ ಬಗ್ಗೆ ಶೋಕಿಸುವುದು ವ್ಯರ್ಥ. ಅದೇ ರೀತಿ ನಾಳಿನ ಬಗ್ಗೆಯೂ ತಲೆಕೆಡಿಸಿಕೊಳ್ಳಬಾರದು. ( ಇಂದಿನದನ್ನು ಮಾತ್ರ ಚಿಂತಿಸಿದರೆ ಸಾಕು).

೧೦೦. ನಾಸ್ತಿ ಕ್ರೋಧಸಮೋ ವಹ್ನಿರ್ನಾಸ್ತಿ
ಜ್ಞಾನಾತ್ಪರಂ ಸುಖಂ ।

ಸಿಟ್ಟಿಗೆ ಸಮನಾದ ಬೆಂಕಿಯಿಲ್ಲ; ಜ್ಞಾನಕ್ಕಿಂತ ಹೆಚ್ಚಿನ ಸುಖವಿಲ್ಲ.

೧೦೧. ಅಸ್ಥಿರಂ ಜೀವಿತಂ ಲೋಕೇ ಧರ್ಮಕೀರ್ತಿರ್ದ್ವಯಂ
ಸ್ಥಿರಂ ।

ಈ ಲೋಕದಲ್ಲಿ ಜೀವನವು ಅಸ್ಥಿರವಾಗಿದೆ. ಆದರೆ ಧರ್ಮ ಹಾಗು ಕೀರ್ತಿಗಳಿಗೆ ಮಾತ್ರ ಅಳಿವಿಲ್ಲ.

